# ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ

ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ಸಂಶೋಧನಾ ಪ್ರಬಂಧ





ಅಧ್ಯಯನಕಾರರು
ಕಾಂತರಾಜು ಸಿ.ಎಸ್

ಮೇಲ್ವಿಚಾರಕರು
ಡಾ.ಎಸ್.ಸಿ.ಪಾಟೀಲ್

ಉಸ್ತುವಾರಿ
ಡಾ.ಎಮ್.ಬಿ.ಪಂಚಾಳ



ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – ೫೮೩ ೨೭೬

# ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಅಧ್ಯಯನಕಾರರು
ಕಾಂತರಾಜು ಸಿ.ಎಸ್

ಮೇಲ್ವಿಚಾರಕರು
ಡಾ.ಎಸ್.ಸಿ.ಪಾಟೀಲ
ಪ್ರಾಧ್ಯಾಪಕರು, ಮುಖ್ಯಸ್ಥರು, ಡೀನ್ ಲಲಿತಕಲಾನಿಕಾಯ

ಉಸ್ತುವಾರಿ
ಡಾ.ಮೋಹನರಾವ್ ಬಿ. ಪಂಚಾಳ್
ತಾ,ಉಪನ್ಯಾಸಕರು





ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೮-೦೯

# ಮಾರ್ಗದರ್ಶಕರ ದೃಢೀಕರಣ ಪತ್ರ

**"ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ"** ಎಂಬ ಸಂಪ್ರಬಂಧವನ್ನು **ಕಾಂತರಾಜು ಸಿ.ಎಸ್** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು. ಎಂ.ಫಿಲ್, ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೮-೧೦-೦೬
ಸ್ಥಳ : ಕನ್ನಡ ವಿಶ್ವವಿದ್ಯಾಲಯ, ಹಂಪಿ

(ಡಾ.ಎಸ್.ಸಿ.ಪಾಟೀಲ)
ಮೇಲ್ವಿಚಾರಕರು
ಪ್ರಾಧ್ಯಾಪಕರು, ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಡಾ. ಮೋಹನರಾವ್. ಬಿ. ಪಂಚಾಳ
ಉಸ್ತುವಾರಿ.
ಪ್ರಾ. ಅಧ್ಯಾಪಕರು
ದೃಶ್ಯಕಲಾ ವಿಭಾಗ.

## ಸಂಶೋಧಕರ ಪ್ರಮಾಣ ಪತ್ರ

**"ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ"** ಎಂಬ ಸಂಪ್ರಬಂಧವನ್ನು ಡಾ. ಎಸ್.ಸಿ.ಪಾಟೀಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್, ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

Kanthraju C.S.

ದಿನಾಂಕ : 08/10/09
ಸ್ಥಳ : ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಕಾಂತರಾಜು ಸಿ.ಎಸ್**
ಅಧ್ಯಯನಕಾರರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

**ಪೀಠಿಕೆ**

ಕಲೆಯು ಪ್ರಾಚೀನ ಕಾಲದಿಂದ ಇಂದಿನವರೆಗೆ ಒಂದು ಬಗೆಯ ಸಂವಹನ ಮಾಧ್ಯಮವಾಗಿ ಕಾರ್ಯ ನಿರ್ವಹಿಸುತ್ತಾ ಬಂದಿದೆ. ಆದಿಮಾನವನು ತನ್ನ ಅಭಿಪ್ರಾಯಗಳನ್ನು ಮತ್ತೊಬ್ಬರಿಗೆ ಸನ್ನೆಯ ಮೂಲಕ ಅಭಿವ್ಯಕ್ತ ಪಡಿಸುತ್ತಿದ್ದು, ನಂತರ ಕುಟ್ಟಿದ ಮತ್ತು ಕೊರೆದ ಚಿತ್ರಗಳ ಮೂಲಕ ಅಭಿವ್ಯಕ್ತಗೊಳಿಸತೊಡಗಿದನು. ಹೀಗೆ ಹುಟ್ಟಿಕೊಂಡ ಚಿತ್ರ ಕಲೆಯು ಮಾನವನ ಅಭಿವ್ಯಕ್ತಿಯ ಬಹುದೊಡ್ಡ ಮಾಧ್ಯಮವಾಗಿ ರೂಪಿತವಾಗುವುದರ ಜೊತೆಗೆ ಸೌಂದರ್ಯನುಭವದ ಸಾಧನವಾಯಿತು. ಈ ಕಲೆಯನ್ನು ಬುಡಕಟ್ಟು ಸಂಪ್ರದಾಯದ ಜನರು ಅದರ ಮೂಲ ರೂಪದಲ್ಲಿ ತಮ್ಮ ಸಂಸ್ಕೃತಿ ಭಾಗವಾಗಿ ಈಗಲೂ ಮುಂದುವರೆಸಿಕೊಂಡು ಬಂದಿರುತ್ತಾರೆ. ಇದೇ ಹಿನ್ನಾಲೆಯಲ್ಲಿ ಜನಪದ ಚಿತ್ರಕಲೆಯೂ ಬೆಳೆಯುತ್ತ ಬಂದಿದೆ. ಇದರ ಮುಂದುವರೆದ ಭಾಗವೇ ಶಿಷ್ಟ ಸಂಪ್ರದಾಯ ಕಲೆ ಎಂದು ಡಾ.ಎಸ್.ಸಿ.ಪಾಟೀಲ ರವರು ವ್ಯಾಖ್ಯಾನಿಸುತ್ತಾರೆ.[೧] ನಾಗರಿಕ ವರ್ಗದವರ ಪ್ರಮಾಣಬದ್ಧ ಲಕ್ಷಣಯುಕ್ತ ಚಿತ್ರಕಲೆ ಶಿಷ್ಟಪದ ಚಿತ್ರಕಲೆಯೆನಿಸಿದರೆ. ಗ್ರಾಮೀಣರು ಲಕ್ಷಣ ಮುಕ್ತ ಅಥವಾ ತಮಗೆ ಅಂದ ಚಂದ ಕಂಡಂತೆ ರಚಿಸಿಕೊಂಡ ಚಿತ್ರಕಲೆ ಜನಪದ ಚಿತ್ರಕಲೆಯಾಗಿದೆ. ಈ ಪ್ರಮಾಣ ಬದ್ಧ ಲಕ್ಷಣಯುಕ್ತ ಚಿತ್ರಗಳು ಜಿಲ್ಲೆಯ ಹಲವು ದೇವಾಲಯಗಳಲ್ಲಿ ಕಂಡು ಬಂದಿವೆ ಜಿಲ್ಲೆಯಲ್ಲಿ ಸಾಂಪ್ರದಾಯ ಚಿತ್ರಗಳು ಮಾತ್ರವಲ್ಲದೆ ಜನಪದೀಯ ಲಕ್ಷಣಗಳುಳ್ಳ ಚಿತ್ರಗಳು ಚಿತ್ರತವಾಗಿವೆ. ಜಿಲ್ಲೆಯ ಹಲವಾರು ಮಠ, ದೇವಾಲಯ ಹಾಗೂ ಉಳ್ಳವರ ಮನೆಗಳಲ್ಲಿ ಇಂತಹ ಚಿತ್ರಗಳು ರಚನೆಯಾಗಿರುವುದು ಕಂಡುಬಂದಿದೆ. ಇವುಗಳ ರಚನಾ ವಿಧಾನ, ತಂತ್ರಗಾರಿಕೆ, ಕಲಾವಿದರ ಕೌಶಲ್ಯ, ಐತಿಹಾಸಿಕ ಹಿನ್ನೆಲೆ, ಸಾಮಾಜಿಕ ಜವಾಬ್ದಾರಿ, ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳು ಮುಂತಾದ ಹಲವಾರು ಮಹತ್ವದ ವಿಷಯಗಳನ್ನು ತಿಳಿಯುವ ಸಲುವಾಗಿ ಈ ಕುರಿತು ಅಧ್ಯಯನಗಳು ತುಂಬಾ ಅವಶ್ಯಕವಾಗಿವೆ.

ಭಿತ್ತಿ ಚಿತ್ರಗಳ ಕುರಿತಾದ ಅಧ್ಯಯನ ನಡೆದಂತೆಲ್ಲಾ ಅವುಗಳ ವಿಶ್ವರೂಪ ಪರಿಚಯವಾಗುತ್ತಲೆ ಹೋಗುತ್ತದೆ. ಹಾಗೆಯೇ ಭಿತ್ತಿ ಚಿತ್ರಗಳನ್ನು ತಿಳಿಯಲು ಸಾಧ್ಯ ಇರುವ ಮೂಲಸಾಮಗ್ರಿಗಳನ್ನು ಹುಡುಕುತ್ತಾ ಸಾಗುವ ಪ್ರಯತ್ನ ನಡೆದಿದೆ. ಈ ದಿಸೆಯಲ್ಲಿ ಚಿತ್ರಕಲೆಯ ಮೂಲಕ ಮಾನವ ತನ್ನ ಸಂಸ್ಕೃತಿಯನ್ನು ಹೇಗೆ ವ್ಯಕ್ತಗೊಳಿಸಿದ್ದಾನೆ ಅಥವಾ ಮಾನವನ ಅತಿ ಪ್ರಮುಖ ಸಂವಹನ ಮಾಧ್ಯಮಗಳಲ್ಲಿ ಒಂದಾದ ಚಿತ್ರಕಲೆಯಲ್ಲಿ ಇತರ ಮೂಲ ಸಾಮಾಗ್ರಿಗಳಿಗಿಂತ ಹೇಗೆ ಭಿನ್ನವಾದ ಸಂಗತಿಗಳು ಅಡಕವಾಗಿವೆ. ಈ ಅಧ್ಯಯನ ಎಂದು ತಿಳಿಯಲು ಸಹಕಾರಿಯಾಗಿದೆ. ಈ ಹಿನ್ನೆಲೆಯಲ್ಲಿ ಒಂದು ಪ್ರಾಮಾಣಿಕ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದ ಮೂಲಕ ನಡೆಸಲಾಗಿದೆ.

ಅಧ್ಯಯನದ ಉದ್ದೇಶ

ಕರ್ನಾಟಕದ ಕಲಾ ಪರಂಪರೆಯಲ್ಲಿ ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳಿಗೆ ತನ್ನದೇ ಆದ ಮಹತ್ವವಿದೆ. ಜಿಲ್ಲೆಯ ಕಲಾಕಾರರು ತಮ್ಮ ಕಲಾ ಪ್ರತಿಭೆಗಳನ್ನು ವ್ಯಕ್ತಪಡಿಸಿರುವ ಅನೇಕ ನೆಲೆಗಳು ಇಲ್ಲಿವೆ. ಮಠ,ದೇವಾಲಯ, ಸ್ಥಿತಿವಂತರ ಗೃಹ ಮುಂತಾದ ಸ್ಥಳಗಳಲ್ಲಿ ಭಿತ್ತಿ ಚಿತ್ರ ರಚಿಸುವ ಮೂಲಕ ಜಿಲ್ಲೆಯ ಜನರು ಕಲಾ ಪೋಷಕರಾಗಿದ್ದಾರೆ. ಹಿಂದಿನ ಪರಂಪರೆಯನ್ನು ಉಳಿಸುವುದರ ಜೊತೆಗೆ ಜಿಲ್ಲೆಯ ಸಾಂಸ್ಕೃತಿಕ ಹಿರಿಮೆಯನ್ನು ಹೆಚ್ಚಿಸಿದ್ದಾರೆ. ಇಂತಹ ಚಿತ್ರಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯನ್ನು ಕಂಡು ಕೊಂಡಿವೆ. ಪ್ರಾದೇಶಿಕತೆ, ಆ ಪ್ರದೇಶದ ಜನರ ಜೀವನ ವಿಧಾನ, ಆಚಾರ, ವಿಚಾರ, ನಂಬಿಕೆ, ಧರ್ಮಾಚರಣೆ ಮುಂತಾದವುಗಳು ಕಲಾವಿದನ ವ್ಯಕ್ತಿತ್ವದ ಮೇಲೆ ಪರಿಣಾಮ ಬೀರಿ ಕಲೆಯಾಗಿ ಹೊರಹೊಮ್ಮುತ್ತದೆ. ಯಾವುದೇ ಕಾಲದ ಭಿತ್ತಿ ಚಿತ್ರಗಳು ಆ ಕಾಲದ ಜನ ಜೀವನದ ಪ್ರತೀಕದಂತಿರುತ್ತದೆ.[೨] ಧಾರ್ಮಿಕ, ರಾಜಕೀಯ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಭಿತ್ತಿ ಚಿತ್ರಗಳ ಅಧ್ಯಯನವು ಮಹತ್ವದ್ದಾಗಿದೆ.

ಭಿತ್ತಿ ಚಿತ್ರಗಳ ಅಧ್ಯಯನದಲ್ಲಿ ಕಲೆಯನ್ನು ಪ್ರೋತ್ಸಾಹಿಸಿದವರಾರು. ಯಾತಕ್ಕಾಗಿ ಚಿತ್ರಗಳು ರಚನೆಗೊಂಡವು? ಇವುಗಳ ಹಿನ್ನೆಲೆ ಏನು? ಇವುಗಳ ಉದ್ದೇಶ ಏನು? ಅವುಗಳ ರಚನಾ ಕಾರ್ಯ ತಂತ್ರ ಯಾವುದು? ವಿಧಾನ ಮಾಧ್ಯಮ ಮುಂತಾದ ವಿಷಯಗಳನ್ನು ತಿಳಿಯಲು ಸಹಕಾರಿಯಾಗಿದೆ. ವಿವಿಧ ರೀತಿಯ ವಿಪತ್ತುಗಳಿಂದ ಹಾಳಾಗುತ್ತಿರುವ, ಹಾಳಾಗಿರುವ, ಭಿತ್ತಿ ಚಿತ್ರಗಳು ಯಾತಕ್ಕಾಗಿ ಹಾಳಾಗಿವೆ? ಅವುಗಳ ಸಂರಕ್ಷಣೆ ಯಾವುದು ಎಂಬೆಲ್ಲ ಮಹತ್ವ ಪೂರ್ಣ ಸಂಗತಿಗಳ, ತಿಳುವಳಿಕೆಗಾಗಿ, ಈ ಅಧ್ಯಯನದ ನಡೆಸಲಾಗುತ್ತಿದೆ.

ಸಂಸ್ಕೃತಿಯನ್ನು ಅರಿಯಲು ಇರುವ ಆಕರಗಳಲ್ಲಿ ಚಿತ್ರಕಲೆಗೆ ಒಂದು ವಿಶಿಷ್ಟವಾದ ಸ್ಥಾನವಿದೆ ಆ ದಿಸೆಯಲ್ಲಿ ಚಿತ್ರಕಲೆಯ ಮುಖಾಂತರ ಮಾನವ ತನ್ನ ಸಂಸ್ಕೃತಿಯನ್ನು ಹೇಗೆ ವ್ಯಕ್ತಗೊಳಿಸಿದ್ದಾನೆ

ಎಂಬುದು ಅಥವಾ ಸಂಸ್ಕೃತಿಯ ಒಂದು ಭಾಗವೇ ಆಗಿರುವ ಚಿತ್ರಕಲೆ ಇತರ ಆಕರಗಳಿಗಿಂತ ಬೇರೆಯಾಗಿ ನಮ್ಮ ಸಾಂಸ್ಕೃತಿಕ ಇತಿಹಾಸವನ್ನು ಪುನರ್ ರಚಿಸಲು ಹೇಗೆ ಸಹಾಯ ಮಾಡುತ್ತದೆ. ಸಂಸ್ಕೃತಿಯ ಆಚಾರ ವಿಚಾರಗಳು, ಮನರಂಜನೆ ವ್ಯಕ್ತಿತ್ವ, ರಾಜಕೀಯ, ಸಂಗತಿಗಳು ಅಂದಿನ ಸ್ಥಿತಿಗತಿಗೆ ಹೇಗೆ ಸ್ಪಂಧಿಸಿದೆ.[೩] ಆ ಸಂದರ್ಭದಲ್ಲಿ ಕಲೆಯಲ್ಲಿ ಹೇಗೆ ಬಳಸಿಕೊಂಡರು, ಸ್ಥಳದಿಂದ ಸ್ಥಳಕ್ಕೆ ಕಲೆಯ ಭಿನ್ನತೆಯ ಏನು? ಮುಂತಾದ ಮಹತ್ವದ ವಿಚಾರಗಳನ್ನು ತಿಳಿಯಲು ಈ ಅಧ್ಯಯನವು ಪ್ರಸ್ತುತವಾಗಿದೆ.

ಕಲೆಗಳ ಅಧ್ಯಯನದಿಂದ ತಿಳಿಯುವ ಮಹತ್ವದ ವಿಷಯಗಳಲ್ಲಿ ಕೆಲವು ಸಲ ಯಾವುದೇ ಕಲೆಗಳ ಪ್ರದರ್ಶನ ಸಂದರ್ಭದ ಹಿಂದಿನ ಆಶಯಗಳನ್ನು ಕಲೆಗಳು ಆಭಾಗದ ಮೂಲ ಸಂಸ್ಕೃತಿಯೊಂದರ ಕಡೆಗೆ ಬೆರಳು ಮಾಡುತ್ತವೆ ಇತಿಹಾಸವು ಹಲವು ಕಾಲಘಟ್ಟಗಳಲ್ಲಿ ನಡೆದಿರಬಹುದಾದ ಸಾಂಸ್ಕೃತಿಕ ಸಂಘರ್ಷಗಳ ಕಡೆಗೆ ನಮ್ಮ ಗಮನ ಸೆಳೆಯುತ್ತದೆ.[೪] ಈ ಜಿಲ್ಲೆಯ ಇತಿಹಾಸವನ್ನು ಕಲೆಗಳ ದೃಷ್ಟಿಯಿಂದ ವಿವೇಚಿಸಿದರೆ ಅದರ ಸಾಂಸ್ಕೃತಿಕ ಭವ್ಯತೆ, ಸೌಂದರ್ಯ ಹಾಗೂ ವೈವಿಧ್ಯತೆ ತಿಳಿಯುತ್ತದೆ. ಇತಿಹಾಸ ಪೂರ್ವದಿಂದಲೂ ಕಲೆಗೆ ಆಸಕ್ತಿಯನ್ನು ತೋರುವುದು ಅದೇ ನೆಲೆಗಳು ಮುಂದುವರೆದಂತೆ ರಾಜಕೀಯವಾಗಿ ವಿಶೇಷ ಸ್ಥಾನ ಪಡೆದುದವುಗಳಾಗಿವೆ. ಮೈಸೂರು ಪ್ರಾಂತ್ಯದಲ್ಲಿ ಒಟ್ಟಾರೆ ತುಮಕೂರು ಜಿಲ್ಲೆಯು ಅತಿ ಹೆಚ್ಚು ಭಿತ್ತಿ ಚಿತ್ರಗಳನ್ನು ಹೊಂದಿದ ಜಿಲ್ಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಅಲ್ಲದೆ ಶೈಲಿ, ವಿನ್ಯಾಸ, ವಸ್ತು ವಿಷಯ ಹಾಗೂ ವೈವಿಧ್ಯತೆಯಿಂದ ಕೂಡಿದೆ. ಈ ವೈವಿಧ್ಯತೆಗೆ ಕಾರಣ ಜಿಲ್ಲೆಯಲ್ಲಿರುವ ಸಂಸ್ಕೃತಿ ಹಾಗೂ ಅದಕ್ಕೆ ಪೂರಕವಾಗಿ ಪೋಷಕರು ಕಾರಣರಾಗಿದ್ದಾರೆ, ಇಲ್ಲಿನ ಭಿತ್ತಿಚಿತ್ರಗಳು ಹಲವು ಧರ್ಮಗಳ ಸಾಮ್ಯತೆಯ ಸಂಕೇತವಾಗಿದೆ. ಆಯಾ ಪ್ರದೇಶದ ಜನರ ಆಶೋತ್ತರಗಳನ್ನು ಪ್ರತಿಬಿಂಬಿಸುವ ಕನ್ನಡಿಯಾಗಿದೆ. ಇಂತಹ ಪ್ರಸ್ತುತ ಅಗತ್ಯತೆಯನ್ನು ಗಮನಿಸಿ ಈ ಅಧ್ಯಯನವನ್ನು ಹಮ್ಮಿಕೊಳ್ಳಲಾಗಿದೆ.

ಇಲ್ಲಿನ ಭಿತ್ತಿ ಚಿತ್ರಗಳು ಸಾಂಪ್ರದಾಯಿಕ ಶೈಲಿ ಜಾನಪದೀಯವಾ ಶೈಲಿಯಲ್ಲಿ ಕಂಡು ಬರುತ್ತವೆ. ಇಂತಹ ಭಿತ್ತಿ ಚಿತ್ರಗಳು ನಾಡಿನ ಹಲವಾರು ದೇವಾಲಯಗಳಲ್ಲಿ, ಮಠ, ಅರಮನೆ, ಚರ್ಚು, ಮಸೀದಿ, ಹಾಗೂ ಶ್ರೀಮಂತ ವರ್ಗದವರ ಗೃಹಗಳು ಗೋಡೆ ಛಾವಣಿ ತೊಲೆ, ಹಲಗೆ, ತಾಳೆಗರಿ, ಹೀಗೆ ಹಲವಾರು ಮಾಧ್ಯಮಗಳ ಮೇಲೆ ರಚನೆ ಗೊಂಡಿರುವುದು ಈಗಲೂ ನೋಡ ಸಿಗುತ್ತವೆ. ಇವುಗಳು ರಚನಾ ವಿಧಾನ, ತಂತ್ರಗಾರಿಕೆ, ಶೈಲಿ, ಪ್ರೇರಣೆ, ಪ್ರೋತ್ಸಾಹ, ವಸ್ತು ವಿಷಯ ಸಾಮಾಜಿಕ ಜವಾಬ್ದಾರಿ, ಆರ್ಥಿಕ ಮತ್ತು ರಾಜಕೀಯ ಸ್ಥಿತಿಗಳನ್ನು ತಿಳಿಯಲು ಇಂತಹ ಅಧ್ಯಯನಗಳು ಅತ್ಯವಶ್ಯಕ.

ತುಮಕೂರು ಜಿಲ್ಲೆಯು ರಾಜಧಾನಿ ಬೆಂಗಳೂರಿನಿಂದ ೭೦ ಕಿ.ಮೀ ದೂರದಲ್ಲಿದ್ದು ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟಿತ್ತು ಹಳೆಯ ಮೈಸೂರು ಭಾಗ ಎಂದೇ ಕರೆಸಿಕೊಂಡಿದೆ. ಮೈಸೂರು ಅರಸರು ಸಾಂಸ್ಕೃತಿಕವಾಗ ಶ್ರೀಮಂತರು, ಕಲೆಗೆ ಹೆಚ್ಚು ಪ್ರೋತ್ಸಾಹ ನೀಡಿದ ರಾಜಮನೆತನಗಳಲ್ಲಿ ಮೈಸೂರು ಅರಸರು ಮುಂಚೂಣಿಯಲ್ಲಿ ನಿಲ್ಲುತ್ತಾರೆ. ಈ ಮಹತ್ತರ ಕಾರ್ಯದಲ್ಲಿ ಟಿಪ್ಪುವಿನ ಪಾತ್ರವು ಹೆಚ್ಚಾಗಿದೆ.

ಇವರುಗಳ ಅವಧಿಯಲ್ಲಿ ಚಿತ್ರಕಲೆ ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತು ಎನ್ನುವುದಕ್ಕೆ ದರಿಯಾದೌವಲತ್, ಮೈಸೂರು ಅರಮನೆ, ಅಲ್ಲದೆ ಸುತ್ತ ಮುತ್ತಲಿನ ದೇವಾಲಯ ಮಠ ಆಲಯಗಳಲ್ಲಿ ಹೇರಳವಾಗಿ ಕಂಡು ಬರುವ ಭಿತ್ತಿ ಚಿತ್ರಗಳು ಸಾಕ್ಷಿಯಾಗಿ ನಿಲ್ಲುತ್ತವೆ. ಇದೇ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳು ರಚನೆಗೊಂಡಿರುವುದು ದೊರೆಕಿರುವ ಶಾಸನಾಧಾರಗಳಿಂದ ಸ್ಪಷ್ಟವಾಗುತ್ತದೆ.

ತುಮಕೂರು ಜಿಲ್ಲೆಯಲ್ಲಿ ಭಿತ್ತಿ ಚಿತ್ರಗಳ ಹಲವಾರು ನೆಲೆಗಳಿದ್ದು, ಈಗಾಗಲೇ ಸಾಕಷ್ಟು ನೆಲೆಗಳು ಗುರುತೇ ಸಿಗದಷ್ಟರ ಮಟ್ಟಿಗೆ ನಾಶವಾಗಿದ್ದು, ಅಲ್ಲಲ್ಲಿ ಉಳಿದಿರುವ ಭಿತ್ತಿ ಚಿತ್ರಗಳ ಬಿಡಿ ಲೇಖನಗಳು ಮಾತ್ರ ಪ್ರಕಟಗೊಂಡಿವೆ. ಜಿಲ್ಲೆಯ ಸಂಪೂರ್ಣ ಭಿತ್ತಿ ಚಿತ್ರಗಳ ಅಧ್ಯಯನದ ಅಗತ್ಯತೆ ಇರುವುದು ಕಂಡುಬರುತ್ತದೆ. ಹಲವಾರು ನೆಲೆಗಳ ಭಿತ್ತಿ ಚಿತ್ರಗಳು ಒಂದರಿಂದ ಮತ್ತೊಂದು ಭಿನ್ನವಾಗಿದ್ದು, ಜನಪದ, ಸಾಂಪ್ರದಾಯಿಕ ಭಿತ್ತಿ ಚಿತ್ರಗಳು ರಚನೆಗೊಂಡಿರುವುದು ಹಾಗೂ ಸಾಂಪ್ರದಾಯಿಕ ಚಿತ್ರಗಳ ರಚನೆಯ ಸಂದರ್ಭದಲ್ಲಿ ನುರಿತ ಕಲಾವಿದರು ಹಾಗೂ ಶಿಷ್ಯ ಪರಂಪರೆಯ ಚಿತ್ರಗಳಲ್ಲಿ ಭಿನ್ನತೆಯು ಕಂಡುಬಂದಿರುತ್ತದೆ. ಕಲಾಕೃತಿಗಳ ರೇಖೆ, ಸಂಯೋಜನೆ, ಬಣ್ಣ, ಹಾಗೂ ವಸ್ತು ವಿಷಯಗಳು ಪ್ರಸ್ತುತ ಅಧ್ಯಯನಕ್ಕೆ ಆಕರವಾಗಿವೆ. ಇಲ್ಲಿ ರಚನೆ ಗೊಂಡಿರುವ ಭಿತ್ತಿ ಚಿತ್ರಗಳ ವಸ್ತು ವಿಷಯವು ಒಂದೇ ಆಗಿದ್ದರೂ (ರಾಮಾಯಣ, ಮಹಾಭಾರತ, ಭಾಗವತ ಪುರಾಣದಲ್ಲಿ ಬರುವ ವಸ್ತುವಿಷಯ) ಒಂದು ನೆಲೆಯಿಂದ ಮೊತ್ತೊಂದು ನೆಲೆಗೆ ಸಂಯೋಜನೆ, ರೇಖೆ, ಬಣ್ಣ ಹಾಗೂ ಶೈಲಿಯ ದೃಷ್ಠಿಯಿಂದ ಭಿನ್ನವಾಗಿರುವುದು ಕಂಡು ಬರುತ್ತದೆ. ಹಾಗೂ ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳನ್ನು ಕುರಿತಾದ ಸಮಗ್ರ ಅಧ್ಯಯನ ಇದುವರೆಗೆ ನಡೆದಿಲ್ಲವಾದ್ದರಿಂದ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ

ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ ಎಂಬ ಅಧ್ಯಯನದಲ್ಲಿ ಒಂಬತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಈ ಒಂಬತ್ತು ಅಧ್ಯಾಯಗಳು ಪ್ರತ್ಯೇಕವಾದ ವಸ್ತುವಿಷಯಗಳನ್ನು ಒಳಗೊಂಡಿರುತ್ತವೆ. ಇವುಗಳ ಸಂಕ್ಷಿಪ್ತ ಸ್ವರೂಪವನ್ನು ಇಲ್ಲಿ ನೀಡಲಾಗಿದೆ.

ಒಂದನೇ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆಯನ್ನು ಒಳಗೊಂಡಿದೆ. ಉದ್ದೇಶದಲ್ಲಿ ಕಲೆಯ ಕುರಿತಾದ ಉಗಮ ಹಾಗೂ ಈ ಅಧ್ಯಯನವು ಪ್ರಸ್ತುತ ದಿನದಲ್ಲಿ ಎಷ್ಟು ಅವಶ್ಯಕ, ಎಂಬಿತ್ಯಾದಿ ವಿವರಣೆ ನೀಡಲಾಗಿದೆ. ಕ್ಷೇತ್ರಕಾರ್ಯದ ಪ್ರಧಾನ ಆಕರಗಳ ಮೇಲೆ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ ಎಂಬುದರ ಸಂಕ್ಷಿಪ್ತ ಮಾಹಿತಿ ನೀಡಲಾಗಿದೆ.

ಎರಡನೇ ಅಧ್ಯಾಯದಲ್ಲಿ ಜಿಲ್ಲೆಯ ಐತಿಹಾಸಿಕ, ಸಾಂಸ್ಕೃತಿಕ ಪರಿಸರ, ಲಲಿತಕಲೆಗಳು ಸೇರಿದಂತೆ ಜಿಲ್ಲೆಯಲ್ಲಿ ಪ್ರಾಗಿತಿಹಾಸದಿಂದ ಕಲೆಯು ಬೆಳೆದು ಬಂದ ದಾರಿ, ರಾಜಾಶ್ರಯ, ಹಾಗೂ ಪಾಳೇಗಾರರ ಆಳ್ವಿಕೆ ವಾಸ್ತು ಶಿಲ್ಪ, ಚಿತ್ರಕಲೆ, ಕಲಾವಿದರು ಜಾನಪದ ಕಲೆ, ಜಿಲ್ಲೆಯ ಸಾಂಸ್ಕತಿಕ ಕೊಡುಗೆ ಹಾಗೂ ವಿಶೇಷತೆಗಳನ್ನು ಕುರಿತು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಜಿಲ್ಲೆಯ ಭಿತ್ತಿ ಚಿತ್ರಗಳು ರಚನೆಗೊಂಡಿರುವ ನೆಲೆಗಳು ಚಿತ್ರಗಳು ಇರುವ, ಇಲ್ಲದಿರುವ ನೆಲೆಗಳ ಕುರಿತು ಹಾಗೂ ಪ್ರತಿಯೊಂದು ನೆಲೆಗಳಲ್ಲಿ ರಚನೆಗೊಂಡಿರುವ ಚಿತ್ರಗಳ ವಸ್ತುವಿಷಯಗಳನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಶೈವ ಧರ್ಮದ ಹಿನ್ನೆಲೆಯ ಕುರಿತಾದ ಚಿತ್ರಗಳ ರೇಖಾವಿನ್ಯಾಸ, ಬಣ್ಣ, ಸಂಯೋಜನೆ ಹಾಗೂ ಶೈವಧರ್ಮದ ಹಿನ್ನೆಲೆಯ ಚಿತ್ರಗಳ ವಸ್ತುವಿಷಯ ಹಾಗೂ ಒಂದೇ ವಸ್ತು ವಿಷಯವು ಬೇರೆ ಬೇರೆ ನೆಲೆಗಳಲ್ಲಿದ್ದರೂ ಒಂದರಿಂದ ಮತ್ತೊಂದಕ್ಕೆ ಹೀಗೆ ಭಿನ್ನವಾಗಿವೆ. ಅವುಗಳ ಶೈಲಿ ಹಾಗೂ ಕಲಾವಿದರ ತಂತ್ರಗಾರಿಕೆಯ ಕುರಿತು ಚರ್ಚಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ವೈಷ್ಣವಧರ್ಮ ಹಿನ್ನೆಲೆಯ ಚಿತ್ರಗಳು ಯಾವ ಯಾವ ನೆಲೆಗಳಲ್ಲಿ ರಚನೆಗೊಂಡಿವೆ. ಅವುಗಳ ಶೈಲಿ ತಂತ್ರಗಾರಿಕೆ ಹಾಗೂ ವಸ್ತುವಿಷಯವನ್ನು ತಿಳಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಸಂಕೀರ್ಣ ಭಿತ್ತಿ ಚಿತ್ರ ಯಾವವ ಸ್ವರೂಪದಲ್ಲಿವೆ ಯುದ್ಧ, ಸಾಮಾಜಿಕ ಪರಿಸರ, ಪ್ರಸ್ತುತ ಕಾಲಘಟ್ಟದ ಜನಜೀವನದ ಹಿನ್ನೆಲೆಯ ಭಿತ್ತಿ ಚಿತ್ರಗಳು, ನೈಸರ್ಗಿಕ, ಅಲಂಕಾರಿಕ, ಹಾಗೂ ಲೈಂಗಿಕ ಚಿತ್ರಗಳು, ಅವುಗಳ ಶೈಲಿ, ಸಂಯೋಜನೆ, ಮುಂತಾದ ವಿಷಯಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳ ಮೇಲಾದ ಪ್ರಭಾವ ಯಾವುದು ಇಲ್ಲಿ ಸಾಂಪ್ರದಾಯಿಕ ಹಾಗೂ ಜನಪದ ಚಿತ್ರಗಳು ಎರಡು ಭಿನ್ನ ಶೈಲಿಯಲ್ಲಿ ರಚನೆಗೊಂಡಿದ್ದು ಇವುಗಳಿಗೆ ಯಾವ ಕಲೆ ಪ್ರಭಾವ ಬೀರಿದೆ. ಯಾವ ಕಾಲ ಹಾಗೂ ಪ್ರೋತ್ಸಾಹಿಸಿದ ಅರಸು ಮನೆತಗಳು, ಧನಿಕರು, ಅಧಿಕಾರಿಗಳು, ಪಾಳೇಗಾರರು ಮುಂತಾದವರ ಪ್ರೇರಣೆ ಮತ್ತು ಪ್ರೋತ್ಸಾಹ. ಇಲ್ಲಿನ ಭಿತ್ತಿ ಚಿತ್ರರಚನೆಯ ಸಂದರ್ಭದಲ್ಲಿ ಕಲಾವಿದನು ಬಳಸಿದ ತಂತ್ರಗಾರಿಕೆ, ಹಾಗೂ ವಿವಿಧ ನೆಲೆಯಲ್ಲಿ ರಚನೆಗೊಂಡಿರುವ ಭಿತ್ತಿ ಚಿತ್ರಗಳು ಯಾವ ಶೈಲಿಯಲ್ಲಿವೆ? ಯಾವ ಶೈಲಿಗೆ ಹೋಲಿಕೆಯಾಗುತ್ತವೆ, ಯಾವ ಶೈಲಿಯು ಪೂರಕವಾಗಿವೆ ಎಂಬಿತ್ಯಾದಿ ವಿವರಗಳನ್ನು ಕುರಿತು ಚರ್ಚಿಸಲಾಗಿದೆ.

ಎಂಟನೇ ಅಧ್ಯಾಯದಲ್ಲಿ ಭಿತ್ತಿ ಚಿತ್ರಗಳ ಸಧ್ಯದ ಸ್ಥಿತಿಗತಿಗಳು, ಯಾವ ಚಿತ್ರಗಳು ಹಾಳಾಗಿವೆ, ಹಾಳಾಗುತ್ತಿವೆ. ಸುರಕ್ಷತೆ ಹೊಂದಿವೆ ಎಂಬುದರ ಕುರಿತು ಹಾಗೂ ಈಗ ಉಳಿದಿರುವ ಭಿತ್ತಿ ಚಿತ್ರಗಳು ಮುಂದಿನ ಪೀಳಿಗೆಗೆ ಮಾದರಿಯಾಗಿ, ಪಳೆಯುಳಿಕೆಯಾಗಿ, ಪರಂಪರೆಯಾಗಿ ಉಳಿಸಿಕೊಳ್ಳುವುದು, ಇದರ ಉಳಿವಿಗಾಗಿ ಸಮಾಜ, ಕಲಾವಿದರು, ಕಲಾವಿದ್ಯಾರ್ಥಿಗಳು, ದೇವಾಲಯದ ಕಾರ್ಯಕಾರಿಣಿ ಸಮಿತಿ, ಹಾಗೂ ಸರ್ಕಾರದ ಕಾರ್ಯ ಏನು ಎಂಬುದರ ವಿವರವನ್ನು ನೀಡಲಾಗಿದೆ.

ಒಂಬತ್ತನೇಯ ಅಧ್ಯಾಯವು ಇಡೀ ಸಂಶೋಧನ ಕಿರು ಪ್ರಬಂಧದ ಸಾರಾಂಶ, ಹೊಸ ಹೊಳವುಗಳು ಹಾಗೂ ಮುಂದಿನ ಅಧ್ಯಯನಕ್ಕೆ ಅನುಕೂಲವಾಗುವ ಮಾಹಿತಿಯನ್ನು, ಕೊಡಲಾಗಿದೆ.

ಈ ಸಂಪ್ರಬಂಧಕ್ಕೆ ಪೂರಕವಾದ ಗ್ರಂಥಗಳ, ವಿವರಣೆ, ಭಿತ್ತಿಚಿತ್ರಗಳ ನೆಲೆಗಳು, ಕ್ಷೇತ್ರಕಾರ್ಯ ಕೈಗೊಂಡಾಗ ಅಧ್ಯಯನಕ್ಕೆ ಪೂರಕವಾದಂತೆ ಮಾಹಿತಿ ನೀಡಿದವರ ವಿಳಾಸ ವಿವರ, ಹಾಗೂ ಭಿತ್ತಿ ಚಿತ್ರಗಳಿರುವ ತಾಲ್ಲೂಕುಗಳ ನಕ್ಷೆಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ ಎಂದು ನಿಗಪಡಿಸಿಕೊಂಡಿದ್ದು, ಭಿತ್ತಿ ಚಿತ್ರಕಲೆಯ ಅಧ್ಯಯನವು ವಿಸ್ತೃತವಾದ ವ್ಯಾಪ್ತಿಯನ್ನು ಹೊಂದಿದೆ. ಕರ್ನಾಟಕದುದ್ದಕ್ಕೂ ಭಿತ್ತಿ ಚಿತ್ರಗಳು ಹೇರವಾಗಿ ರಚನೆಗೊಂಡಿದ್ದು, ಅಂತೆಯೇ ತುಮಕೂರು ಜಿಲ್ಲೆಯು ಭಿತ್ತಿ ಚಿತ್ರಗಳ ಕಲೆಯ ನೆಲೆಯಾದಂತೆ ಇರುವುದರಿಂದ, ಜಿಲ್ಲೆಯಾದ್ಯಂತ ರಚನೆಗೊಂಡಿರುವುದರಿಂದ, ಅಧ್ಯಯನದ ಅನುಕೂಲಕ್ಕಾಗಿ ತುಮಕೂರು ಜಿಲ್ಲೆಯನ್ನು ಮಾತ್ರ ಸೀಮಿತಗೊಳಿಸಿಕೊಂಡು. ಅಧ್ಯಯನಕ್ಕೆ ಪೂರಕವಾಗುವಂತ ಭಿತ್ತಿಚಿತ್ರಗಳು, ಶೈಲಿ, ಹಾಗೂ ನೆಲೆಗಳನ್ನು ಅಂದರೆ ರಾಜ್ಯ ಮತ್ತು ಹೊರ ರಾಜ್ಯಗಳ ಭಿತ್ತಿ ಚಿತ್ರಗಳನ್ನು ಅಧ್ಯಯನದ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ವೈಧಾನಿಕತೆ**

ಪ್ರಸ್ತುತ ಅಧ್ಯಯನವು ಅಧ್ಯಯನವನ್ನು ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಂಡು ರೂಪಿಸಲಾಗಿದೆ.

೧. ಮೂಲ ಆಕರ ಸಾಮಾಗ್ರಿ

೨. ಆನುಷಂಗಿಕ ಆಕರ ಸಾಮಾಗ್ರಿ

**೧. ಮೂಲ ಆಕರ ಸಾಮಾಗ್ರಿ**

ಅಧ್ಯಯನಕ್ಕೆ ಬೇಕಾಗುವ ಆಕರವು ಭಿತ್ತಿ ಚಿತ್ರಗಳ ನೆಲೆಗಳಾಗಿದ್ದು ನೇರವಾಗಿ ಚಿತ್ರಗಳಿರುವ ಸ್ಥಳಗಳಿಗೆ ಹೋಗಿ ಭಿತ್ತಿ ಚಿತ್ರಗಳ ಛಾಯಾ ಚಿತ್ರಗಳನ್ನು ತೆಗೆದುಕೊಂಡು ಅಲ್ಲಿಯೇ ಚಿತ್ರಗಳ ಬಣ್ಣ, ರೇಖೆ, ಸಂಯೋಜನೆಗಳು ಹಾಗೂ ವಸ್ತು ವಿಷಯಗಳನನು ಕುದ್ದಾಗಿ ಅಧ್ಯಯನ ಮಾಡಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿ**

ಕೆಲವು ನೆಲೆಗಳಲ್ಲಿ ಹಾಳಾದ ಭಿತ್ತಿ ಚಿತ್ರಗಳನ್ನು ಸ್ಥಳೀಯ ಕಲಾವಿದರು ಮರುಕೃತಿ ಮಾಡಿರುವುದನ್ನು ಅಧ್ಯಯನದ ಅವಶ್ಯಕತೆಗೆ ಬಳಸಿಕೊಳ್ಳಲಾಗಿದೆ. ದೇವಾಲಯದ ಅರ್ಚಕರು ಸ್ಥಳೀಯ ಹಿರಿಯ ನಾಗರೀಕರುಗಳ ಸಂದರ್ಶನವನ್ನು ಬಳಸಿಕೊಳ್ಳಲಾಗಿ ಇದುವರೆಗೆ ಜಿಲ್ಲೆಯ ಭಿತ್ತಿ ಚಿತ್ರಗಳ ಬಗ್ಗೆ ಬಂದಿರುವ ಲೇಖನಗಳು, ಗ್ರಂಥಗಳು, ನಿಯತಕಾಲಿಕಗಳು, ಮಾಸಪತ್ರಿಕೆಗಳು, ಹಾಗು ಗ್ರಂಥಾಲಯಗಳಲ್ಲಿ ಮಾಹಿತಿಯನ್ನು ಅಧ್ಯಯನಕ್ಕೆ ಅನುಷಂಗಿಕವಾಗಿ ಬಳಸಿಕೊಳ್ಳಲಾಗಿದೆ.

## ಅಡಿಟಿಪ್ಪಣಿ

೧. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೭

೨. ಡಾ.ಯಾದಪ್ಪ ಪರದೇಶಿ, ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪುಟ-೧೫

೩. ಡಾ.ಎಸ್.ಸಿ.ಪಾಟೀಲ, ವರ್ಣಸಂಚಯ, ಪುಟ-೩

೪. ಡಾ.ಹಿ.ಚಿ.ಬೋರಲಿಂಗಯ್ಯ, ಕರ್ನಾಟಕ ಕಲೆಗಳ ಕೋಶ, ಪುಟ-೩

# ತುಮಕೂರು ಜಿಲ್ಲೆಯ ಸಾಂಸ್ಕೃತಿಕ ಪರಿಸರ, ಲಲಿತಕಲೆಗಳು

ಪ್ರಾಚೀನ ಕಾಲದಿಂದ ಇಂದಿನವರೆಗೆ ಕಲೆಯು ಮನುಷ್ಯ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿದೆ. ಜನಾಂಗದ ಪ್ರತಿಬಿಂಬವಾಗಿ ಪ್ರಾತಿನಿಧಿಕವಾಗಿ ಬೆಳೆಯುತ್ತ ಸಮಾಜದ ಆಯಾ ಕಾಲದ ಸಂಗತಿಗಳನ್ನು ಅಂದಿನ ಸಂಸ್ಕೃತಿಯನ್ನು ಮುಂದಿನ ಪೀಳಿಗೆಗೆ ಸಾಗಿಸುತ್ತ ನಾಡಿನ ಹಿರಿಮೆಯನ್ನು ಹೆಚ್ಚಿಸಿದೆ. ಇತಿಹಾಸದಲ್ಲಿ ನಾಡಿನ ಏಳಿಗೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕಲೆ ಕಾರ್ಯ ನಿರ್ವಹಿಸುತ್ತಾ ಸಾಗಿದೆ. ಒಂದು ನಾಡಿನ ಸಾಂಸ್ಕೃತಿಕ, ರಾಜಕೀಯ, ಆರ್ಥಿಕ, ವೈಭವಗಳನ್ನು ತಿಳಿಯಲು ಭಿತ್ತಿ ಚಿತ್ರಗಳ ಪಾತ್ರ ಪ್ರಮುಖವಾದುದು. ಒಂದು ಜಿಲ್ಲೆಯಲ್ಲಿ ಕಲಾ ವೈಭವವನ್ನು ತಿಳಿಯಬೇಕಾದರೆ ಅಲ್ಲಿನ ಲಲಿತಕಲೆಗಳನ್ನು ಗಮನಿಸಬೇಕು. ರಾಜರು, ಪಾಳೇಗಾರರು, ದೇಸಾಯಿಗಳು ಹಾಗೂ ಸಮಾಜದ ಕಲಾಪ್ರೇಮಿಗಳು ಕಲೆಯನ್ನು ಹೇಗೆ ಪ್ರೋತ್ಸಾಹಿಸುತ್ತಾ ಬಂದಿದ್ದಾರೆ ಎಂಬ ಅಂಶಗಳನ್ನು ಚಿತ್ರಕಲೆಯ ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ. ತುಮಕೂರು ಜಿಲ್ಲೆಯು ಹಲವಾರು ರಾಜಮನೆತನಗಳು ಸುಮಾರು ೨೫ ಪಾಳೇಗಾರರು ಆಳಿದ ಜಿಲ್ಲೆ ಎಂಬ ಕೀರ್ತಿಗೆ ಪಾತ್ರವಾಗಿದೆ. ಎಲ್ಲ ಅರಸರು ಅಧಿಕಾರಿಗಳು, ಶ್ರೀಮಂತರುಗಳು, ಕಲೆಯನ್ನು ಬೆಳೆಸಿ ಪ್ರೋತ್ಸಾಹಿಸಿದ್ದಾರೆ. ವಿಜಯನಗರ ಪತನದ ನಂತರ ಚಿಕ್ಕ ಚಿಕ್ಕ ರಾಜಮನೆತನಗಳು ಸ್ವತಂತ್ರರಾಗಿ ಮಧುಗಿರಿ, ಶಿರಾ, ಪಾವಗಡ, ನಿಡಗಲ್ಲು, ಗುಬ್ಬಿ, ಹೊಸಹಳ್ಳಿ, ಮಿಡಿಗೇಶಿ, ಕುಣಿಗಲ್, ಚಿಕ್ಕನಾಯಕನಹಳ್ಳಿ ಮುಂತಾದ ಪ್ರದೇಶಗಳಲ್ಲಿ ಆಳತೊಡಗಿದರು. ಈ ಎಲ್ಲಾ ಸಂಸ್ಥಾನಗಳು ಕಲೆಗೆ ವಿಶೇಷ ಪ್ರೋತ್ಸಾಹವನ್ನು ನೀಡಿ ಜಿಲ್ಲೆಯ ಕಲೆಯ ಬೆಳವಣಿಗೆಗೆ ಕಾರಣರಾಗಿದ್ದಾರೆ, ಈ ಹಿಂದೆ ವಿಜಯನಗರದ ಕಲಾವಿದರಿಗೆ ಆಶ್ರಯನೀಡುವುದು. ದೇವಾಲಯಗಳು, ವಾಸ್ತುಶಿಲ್ಪ, ಶಿಲ್ಪ, ಭಿತ್ತಿ ಚಿತ್ರಗಳನ್ನು ರಚಿಸುವುದು ಹೀಗೆ ಹಲವಾರು ಕಾರ್ಯಗಳ ಮೂಲಕ ತುಮಕೂರು ಪ್ರದೇಶವನ್ನು ಕಲೆಯ ಬೀಡಾಗಿ ಮಾಡಿದ್ದಾರೆ.

ತುಮಕೂರು ಜಿಲ್ಲೆ ಕೆಲವು ಪ್ರದೇಶಗಳು ಒಂದಲ್ಲಾ ಒಂದು ರೀತಿಯಲ್ಲಿ ಕಲಾಮಹತ್ವ ಹೊಂದಿವೆ. ಅಲ್ಲಲ್ಲಿ ದೊರೆತಿರುವ ಶಾಸನಗಳಿಂದ ಆ ಪ್ರದೇಶದ ಪ್ರಾಚೀನ ಇತಿಹಾಸವನ್ನು ತಿಳಿಯಲು ಸಹಕಾರಿಯಾಗಿದೆ.

ತುಮಕೂರು ಜಿಲ್ಲೆಯು ಲಲಿತ ಕಲೆಗಳ ದೃಷ್ಟಿಯಿಂದ ಬಹು ಶ್ರೀಮಂತವಾಗಿದೆ. ಬಹು ಹಿಂದಿನಿಂದಲೂ ಕಲೆಗಳಿಗೆ ಮಹತ್ವದ ಸ್ಥಾನ ದೊರಕಿದೆ ಎನ್ನುವುದಕ್ಕೆ ಜಿಲ್ಲೆ ತುಂಬ ಅನೇಕ ನಿದರ್ಶನಗಳು ಇಂದಿಗೂ ಕಂಡು ಬರುತ್ತವೆ. ಜಿಲ್ಲೆಯ ಒಂದೊಂದು ಭಾಗವು ಒಂದೊಂದು ಕಲಾ ಪ್ರಕಾರದಲ್ಲಿ ಪರಿಣಿತಿಯನ್ನು ಹೊಂದಿದೆ. ಕಲೆ, ಸಾಹಿತ್ಯ, ಸಂಗೀತ, ನಾಟಕ, ನೃತ್ಯ, ಜನಪದ ಕಲೆಗಳನ್ನು ತನ್ನೊಳಗೆ ಅಡಗಿಸಿ ಕೊಂಡಿದೆ. ಖ್ಯಾತ ಸಾಹಿತಿ ಕವಿತಾ ಕೃಷ್ಣರವರ ಒಂದು ಕವನದ ಆ ಸಾಲುಗಳು ಜಿಲ್ಲೆಯ ಕಲಾ ಶ್ರೀಮಂತಿಕೆಯನ್ನು ಪ್ರಾತಿನಿಧಿಕವಾಗಿ ಬಿಂಬಿಸುತ್ತವೆ.

ಗುಡಿಗೋಪುರಗಳ ನೆಲವೀಡು
ಕಂಗು- ತೆಂಗುಗಳ ಸಿರಿಬೀಡು
ನೆಲ-ಜಲ-ಗಿರಿ ದುರ್ಗಗಳ ನಾಡು
ಹಲವು ಧರ್ಮಗಳ ಸಮನ್ವಯ ಗೂಡು
ಪುಣ್ಯಕ್ಷೇತ್ರಗಳ ಪಾವನ ನೆಲೆ
ಸಾಹಿತ್ಯ ಲಲಿತ ಕಲೆಗಲ ಸೆಲೆ
ಬೆರಗುಗೊಳಿಸುವ ಕಲೆಯ ಬೆಲೆ
ಶಿಕ್ಷಣ ಗಂಗೋತ್ರಿ ಈ ದ್ವಿನೆಲೆ

ಈ ಮೇಲಿನ ಸಾಲುಗಳಲ್ಲಿ ತುಮಕೂರು ಜಿಲ್ಲೆಯ ವೈವಿಧ್ಯತೆ ಹಲವು ಬಗೆಯ ಮುಖಗಳ ಪರಿಚಯ ಕಂಡುಬರುತ್ತದೆ. ಹಲವು ಧರ್ಮೀಯರು ನೆಲೆಸಿರುವ ನಾಡಾಗಿದೆ. ಹಿಂದು, ಕ್ರೈಸ್ತ, ಮುಸ್ಲೀಂ, ಜೈನ, ಧರ್ಮಗಳು ಅವುಗಳಿಗೆ ಸಂಬಂಧಿಸಿದಂತೆ ರೂಪುಗೊಂಡಿರುವ ಜಾನಪದ ಕಲೆಗಳು ಸಂಪದ್ಭರಿತವಾಗಿವೆ. ಜಿಲ್ಲೆಯ ಪ್ರತಿಯೊಂದು ತಾಲ್ಲೂಕು ಒಂದೊಂದು ಕಲೆಗೆ ಹೆಸರಾಗಿವೆ. ತೊಗಲು ಬೊಂಬೆಯಾಟ, ಗಾರುಡಿ ಗೊಂಬೆ ಕುಣಿತ, ಕರಡಿಕುಣಿತ, ಮಾರಮ್ಮನ ಕುಣಿತ, ಸೋಮನಕುಣಿತ, ಹುಲಿವೇಷದ ಕುಣಿತ, ವೀರಗಾಸೆ ಕುಣಿತ, ಯಕ್ಷಗಾನ ಬಯಲಾಟ, ಕೋಲಾಟ, ಸೂತ್ರದ ಗೊಂಬೆಯಾಟ ನಂದಿಧ್ವಜ ಕುಣಿತ, ಭಜನೆಯಂತಹ ಜನಪದ ಕಲೆಗಳು, ಜಿಲ್ಲೆಯಾದ್ಯಂತ ಹರಡಿವೆ. ಅಷ್ಟೇ ಅಲ್ಲದೆ ಜನಪದ ವಾದ್ಯಗಳಾದ ಕಹಳೆ, ಚೌಡಿಕೆ, ಹೆರಿಗೆ, ಕರಡಿನಗಾರಿ, ಗೊರವನ ಢಮರುಗ, ಡಂಕವಾದ್ಯ, ಚಿಟ್ಟಮೇಳ, ತಂಬೂರಿ ಭಜನೆ, ಕರಪಾಲಮೇಳ, ಸೋಬಾನೆ ಪದ, ಜುಂಜಪ್ಪನಗಣೆ, ವೀರಭದ್ರನ ಹಲಗೆ, ಮುಂತಾದ ವಾದ್ಯಮೇಳಗಳನ್ನು ಜಿಲ್ಲೆ ಒಳಗೊಂಡಿದೆ. ಈ ಎಲ್ಲಾ ಪ್ರಕಾರಗಳು ತನ್ನದೇ ಆದ ವಿಶೇಷತೆಗಳನ್ನು ಒಳಗೊಂಡ ಕಲೆಗಳಾಗಿವೆ.

ಸಂಗೀತ ಕ್ಷೇತ್ರದಲ್ಲೂ ಜಿಲ್ಲೆಯು ಗುರುತಿಸಿಕೊಂಡಿರುವುದು. ದೇವರಾಯನ ದುರ್ಗದ ದಾಸರಿಂದ ಕೀರ್ತನ ಸಾಹಿತ್ಯ ಮರುಹುಟ್ಟು ಪಡೆಯಿತೆನ್ನಲಾಗಿದೆ. ಸಾತನೂರಿನ ಪುಂಡರಿಕ ವಿಠಲ ಪ್ರಸಿದ್ಧ ಸಂಗೀತ ವಿದ್ವಾಂಸ, ಸಂಗೀತ ಕ್ಷೇತ್ರದ ಧ್ರುವತಾರೆ ಎನಿಸಿಕೊಂಡಿದ್ದಾರೆ. ತುಮಕೂರಿನ ಹೊನ್ನಂಜಾವೆರ್,

ವಿ.ರಾಜು, ಚಿ.ಕೆ ರಾಮಮೂರ್ತಿ, ಅಡಗೂರು ಬಸವರಾಜು, ಉತ್ತಮ ಗಾಯಕರು ಟಿ.ವಿ. ಭದ್ರಾವೆಂರ್ ಗಂಗಾಧರ ಉತ್ತಮ ಮೃದಂಗ ಮತ್ತು ತಬಲಾ ವಾದಕರು ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ. ಹಾಗೇ ಭರತನಾಟ್ಯ ಕಲೆಯ ಆರಾಧಕ ಕೆ.ಎಂ. ರಾಮನ್, ಶ್ರೀ ರಾಜೇಶ್ವರಿ ನೃತ್ಯ ಕಲಾ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ.

ಚಿತ್ರಕಲೆಯಲ್ಲಿ ಮೈಸೂರು ಬಿಟ್ಟರೆ ಅತಿ ಹೆಚ್ಚು ಭಿತ್ತಿ ಚಿತ್ರ ನೆಲೆಗಳನ್ನು ಹೊಂದಿರುವ ಜಿಲ್ಲೆ ಎಂಬ ಕೀರ್ತಿಗೆ ಪಾತ್ರವಾಗಿದೆ. ವಿಜಯನಗರೋತ್ತರ ಚಿತ್ರಕಲೆಯು ತುಮಕೂರು ಜಿಲ್ಲೆಯಲ್ಲಿ ವ್ಯಾಪಕವಾಗಿ ಮುಂದುವರೆದಿದೆ. ಹಲವಾರು ಪಾಳೇಗಾರರು, ಫೌಜುದಾರರು, ದಂಡನಾಯಕರು ಅಧಿಕಾರಿಗಳು, ಮಠಮಾನ್ಯಗಳು, ವಿಜಯನಗರ ಪತನದ ನಂತರ ಚಿತ್ರಕಲೆಯನ್ನು ಬೆಳೆಸಿದರು. ಪೋಷಕರಾಗಿದ್ದಾರೆ. ಸೀಬಿ, ಶಿರಾ, ಕೆರೆಗೋಡಿ ರಂಗಾಪುರ, ತುಮಕೂರಿನ ಬಳಪದ ಕಾರ್ಖಾನೆಯಲ್ಲಿನ ಚಿತ್ರಗಳು ಉತ್ಕೃಷ್ಟವಾದ ಕಲಾನೈಪುಣ್ಯತೆಯಿಂದ ಕೂಡಿವೆ. ಅಮೃತೂರು, ಬೆನಕನಕೆರೆ, ಹೆಬ್ಬೂರು, ಹಾಗಲವಾಡಿ, ಗುಬ್ಬಿ, ಯಡೆಯೂರು, ಮಿಂಚುಕಲ್ಲು, ಗೊಲ್ಲಹಳ್ಳಿ, ಮಾಗಡಿ ರಂಗನಾಥ ಮುಂತಾದ ಕಡೆಗಳಲ್ಲಿ ಉತ್ತಮ ಭಿತ್ತಿಚಿತ್ರಗಳು ಇದ್ದವು ಎಂಬ ಪುರಾವೆಗಳಿವೆ. ಕೆಲವು ಪ್ರದೇಶಗಳಲ್ಲಿ ಅಲ್ಪ ಸ್ವಲ್ಪ ಉಳಿದಿದ್ದು ಕೆಲವು ನೆಲೆಗಳಲ್ಲಿ ಸಂಪೂರ್ಣ ನಾಶವಾಗಿವೆ. ಇವುಗಳ ವಿವರಗಳನ್ನು ಮುಂದಿನ ಅಧ್ಯಾಯದಲ್ಲಿ ನೀಡಲಾಗಿದೆ. ಶಿಲ್ಪ ವಾಸ್ತುಶಿಲ್ಪ ಕಲೆಗಳಿಗೆ ಅತಿ ಹೆಚ್ಚು ಆದ್ಯತೆ ಜಿಲ್ಲೆಯಲ್ಲಿ ದೊರಕಿದ್ದು ಉದಾಹರಣೆಗಳಿಂದ ಕಂಡುಬರುವುದು. ಅಮರಶಿಲ್ಪ ಜಕಣಾಚಾರಿ ನಿರ್ಮಿಸಿದ ಎಂದು ನಂಬಲಾಗಿರುವ ಕೈದಾಳ, ಹಳೇಬೀಡು, ಬೇಲೂರು, ಮಾದರಿಯನ್ನೇ ಹೋಲುವ ಅಷ್ಟೇಕಲಾತ್ಮಕ ಕುಸುರಿ ಕೆತ್ತನೆಯಿಂದ ಕೂಡಿದ ಅರಳುಗುಪ್ಪೆಯ ಚೆನ್ನಕೇಶವ ದೇವಾಲಯ, ನಾಗಾಲಾಪುರ, ಮುಂತಾದ ಹಲವಾರು ಪ್ರದೇಶಗಳಲ್ಲಿ ಹೊಯ್ಸಳ, ನೊಳಂಬ, ಚಾಳುಕ್ಯರ, ಹಾಗೂ ವಿಜಯನಗರ ಅರಸರ ಕಾಲದ ಶೈಲಿಗೆ ಸೇರಿದ ಹಲವಾರು ವಾಸ್ತು ಶಿಲ್ಪಗಳು ಜಿಲ್ಲೆಯಲ್ಲಿ ಹರಡಿಕೊಂಡಿವೆ.

ನಾಟಕ ಕಲೆಯಲ್ಲಿ ಜಿಲ್ಲೆಯು ಅಗ್ರಸ್ಥಾನ ಪಡೆದುಕೊಂಡಿದೆ "ಮೂಡಲಪಾಯ" ಎಂಬ ಬಯಲಾಟ ಕಲಾಪ್ರಕಾರ ಪ್ರಖ್ಯಾತವಾಗಿದೆ. ಜಿಲ್ಲೆಯ ಕೀರ್ತಿಯನ್ನು ಬೆಳಗಿದ ಗುಬ್ಬಿ ಕಂಪನಿಯು ಪೌರಾಣಿಕೆ ನಾಟಕಗಳನ್ನು ಹಾಗೂ ಸಾಮಾಜಿಕ ನಾಟಕಗಳನ್ನು ವಿಶೇಷ ರಂಗ ಸಜ್ಜಿಕೆಯಿಂದ ನೀಡಿತು. ಕಲೆಯೇ ಕಾಯಕವೆಂದು ತಿಳಿದು ತನ್ನೆಲ್ಲಾ ಜೀವಿತಾವಧಿಯನ್ನು ಸಂಪೂರ್ಣವಾಗಿ ಕಲೆಗೆ ತೊಡಗಿಸಿಕೊಂಡು ವಿಶ್ವ ದಾಖಲೆಯತ್ತ ಮುಖಮಾಡಿದ ಗುಬ್ಬಿ ಕಂಪನಿಯು ಜಿಲ್ಲೆಯ ಮುಕುಟವಿದ್ದಂತೆ. ಗುಬ್ಬಿ ಕಂಪನಿಯ ಅಕ್ಷಯಪಾತ್ರೆ ಎಂಬ ಬಿರುದಿಗೆ ಪಾತ್ರರಾದ ಚಿಕ್ಕನಾಯಕನ ಹಳ್ಳಿಯ ಸಿ.ಬಿ.ಮಲ್ಲಪ್ಪನವರು "ಚಂದ್ರಮೌಳೇಶ್ವರ ನಾಟಕ ಸಭಾ" ಎಂಬ ನಾಟಕ ಕಂಪನಿಯನ್ನು ಸ್ಥಾಪಿಸಿ ಪೌರಾಣಿಕ ಐತಿಹಾಸಿಕ ಹಾಗೂ ಸಾಮಾಜಿಕ ನಾಟಕಗಳನ್ನು ಪ್ರದರ್ಶನಗೊಳಿಸಿದರು. "ಭಕ್ತವೀರ" ನಾಟಕವು ಮಲ್ಲಪ್ಪನವರಿಗೆ ಜನಪ್ರೀಯತೆಯನ್ನು ತಂದುಕೊಟ್ಟ ನಾಟಕವಾಗಿದೆ. ೧೯೨೩ರಿಂದ ೧೯೫೭ ರವೆರೆಗೆ ಕಲಾ ಸೇವೆಯಲ್ಲಿ

ನಿರತರಾಗಿದ್ದರು. ಈ ಕಂಪನಿಯಡಿಯಲ್ಲಿ ನೂರಾರು ಕಲಾವಿದರು ಸೇವೆ ಸಲ್ಲಿಸಿದ್ದು ಜಿಲ್ಲೆಯ ಮುಖ್ಯ ನಾಟಕ ಕಂಪನಿಯಲ್ಲಿ ಒಂದಾಗಿತ್ತು.

೧೯೪೦ರ ಸುಮಾರಿಗೆ ಪ್ರಾರಂಭಗೊಂಡ "ಹಿರಣ್ಣಯ್ಯ ಮಿತ್ರ ಮಂಡಲಿ" ಯನ್ನು ಎಂ.ಆರ್ ಪಾರ್ಥಸಾರಥಿ, ಸುಬ್ಬಣ್ಣ, ಅಣ್ಣಯ್ಯ ಇವರು ಜೊತೆಗೂಡಿ ಬೆಳೆಸಿದರು, ರಂಗ ಸಜ್ಜಿಕೆಯ ಕಾರ್ಯದಲ್ಲಿ ನಿಪುಣತೆಯನ್ನು ಪಡೆದ ಹಾಗೂ ಹಲವಾರು ಸ್ತ್ರೀ ಪುರುಷ ಪಾತ್ರಗಳಲ್ಲಿ ಸೈ ಎನಿಸಿಕೊಂಡಿದ್ದ ಹಿರಣ್ಣಯ್ಯನವರು ದೇವದಾಸಿ ಎಂಬ ನಾಟಕವನ್ನು ೩೮೭ ಪ್ರದರ್ಶನದತ್ತ ಕೊಂಡೊಯ್ದು ೧೯೫೩ರಲ್ಲಿ ನಿಧನರಾದರು. ಈ ಕಂಪನಿಯನ್ನು ಮುಂದೆ ಮಗನಾದ ಮಾಸ್ಟರ್ ಹಿರಣ್ಣಯ್ಯನವರು ಮುಂದುವರೆಸುತ್ತಿದ್ದಾರೆ. ಇವರು ರಾಜ್ಯದಲ್ಲೇ ಅಲ್ಲದೆ ರಾಷ್ಟ್ರ ಅಂತರರಾಷ್ಟ್ರಗಳಲ್ಲಿ ಪ್ರದರ್ಶನಗಳನ್ನು ನೀಡಿ ಇಂದಿಗೂ ಕ್ರಿಯಾಶೀಲರಾಗಿ ಕಲಾಸೇವೆಯಲ್ಲಿ ತೊಡಗಿದ್ದಾರೆ. ಅಲ್ಲದೆ ಜಿಲ್ಲೆಯಲ್ಲಿ ಹಲವಾರು ವೃತ್ತಿ ನಾಟಕ ಸಂಸ್ಥೆಗಳು ಸುಖ ದುಃಖಗಳನ್ನುಂಡು ಪ್ರೇಕ್ಷಕರಿಗೆ ಮನೋರಂಜನೆಯನ್ನು ನೀಡಿವೆ. ಹವ್ಯಾಸಿ ನಾಟಕ ತಂಡಗಳು ಜಿಲ್ಲೆಯ ನಾಟಕ ಕಲೆಗೆ ಪುಷ್ಟಿಯನ್ನು ನೀಡಿ ಪ್ರಸ್ತುತ ದಿನಮಾನಗಳ ಸಾಮಾಜಿಕ ಜೀವನಕ್ಕೆ ಕನ್ನಡಿ ಹಿಡಿದಿವೆ. ಹಚ್.ಎಂ.ವಿ.ಯ ಲಲಿತಕಲಾ ಸಂಘ ಕುಪ್ಪೂರು ಕೃಷ್ಣಮೂರ್ತಿ, ಗೌಡನಕಟ್ಟೆ ತಿಮ್ಮಪ್ಪರವರ ನೇತೃತ್ವದಲ್ಲಿ ಹೆಸರಾಂತ ಲೇಖಕರ ನಾಟಕಗಳನ್ನು ರಾಜ್ಯಾದ್ಯಂತ ಪ್ರದರ್ಶಿಸಿ ಹಲವಾರು ಪ್ರಶಸ್ತಿಗಳಿಸಿದರೆ. ನುರಿತ ಕಲಾವಿದರು ಈ ತಂಡದ ಏಳಿಗೆಗೆ ಕಾರಣರಾಗಿದ್ದಾರೆ. ತಿಪಟೂರಿನ ಅಭಿನಾಯಕ ಕಲಾತಂಡ, ಪಾವಗಡದ ನಾಟಕಸಂಘ, ಮಧುಗಿರಿಯ ನಾಟಕಮನೆ, ಇನ್ನು ಮುಂತಾದ ಹವ್ಯಾಸಿ ಕಲಾ ತಂಡಗಳು ಕಾರ್ಯ ನಿರ್ವಹಿಸುತ್ತಿದ್ದು ಜಿಲ್ಲೆಯ ನಾಟಕ ಕಲೆಗೆ ತಮ್ಮ ಕೊಡುಗೆ ನೀಡುತ್ತಿವೆ.

**ಭೌಗೋಳಿಕ ಲಕ್ಷಣ**

ತುಮಕೂರು ಜಿಲ್ಲೆಯು ಕರ್ನಾಟಕದ ಆಗ್ನೇಯ ಭಾಗದಲ್ಲಿದ್ದು ಬೆಂಗಳೂರಿಗೆ ೭೦ ಕಿಮೀ ಗಳ ಅಂತರದಲ್ಲಿದೆ. ಭೌಗೋಳಿಕ ವಾಗಿ ಜಿಲ್ಲೆಯು ಬಯಲು ಪ್ರದೇಶದಿಂದ ಕೂಡಿದ್ದು ರಾಜ್ಯದಲ್ಲಿ ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆಗಳಲ್ಲೊಂದಾಗಿದೆ. ಕೃಷ್ಣಾ ಮತ್ತು ಕಾವೇರಿ ಜಲಾಶಯನ ಪ್ರದೇಶದಲ್ಲಿದೆ. ಇದು ರಾಜಧಾನಿಗೆ ಹತ್ತಿರವಿರುವುದರಿಂದ ಶೈಕ್ಷಣಿಕ, ಕೈಗಾರಿಕ ಮತ್ತು ತಂತ್ರಜ್ಞಾನ ಕ್ಷೇತ್ರಗಳಲ್ಲಿ ಇತ್ತೀಚಿಗೆ ಬೆಳವಣಿಗೆ ಹೊಂದುತ್ತಿದೆ. ರಾಷ್ಟ್ರೀಯ ಹೆದ್ದಾರಿ ತುಮಕೂರು ನಗರದೊಳಗೆ ಹಾದು ಹೋಗಿರುವುದರಿಂದ ರಾಜ್ಯ ಮತ್ತು ಹೊರರಾಜ್ಯಗಳಿಗೆ ಸಂಪರ್ಕಕಲ್ಪಿಸುತ್ತಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ೧೦,೫೯೮ ಚ ಕಿ.ಮೀ ಗಳು ಇದ್ದು ೧೩° ೪೫ ದಿಂದ ೧೪° ೨೪ ಉತ್ತರ ಇಕ್ಷಾಂಶ ಮತ್ತು ೭೬° ೨೦ ದಿಂದ ೭೭° ೩೨ ಪೂರ್ವ ರೇಖಾಂಶಗಳ ನಡುವೆ ನೆಲೆಸಿದೆ° ಈ ಜಿಲ್ಲೆಯ ಈಶಾನ್ಯ ಭಾಗವು ಆಂದ್ರ ಪ್ರದೇಶದ ಅನಂತಪುರ, ಪೂರ್ವಕ್ಕೆ ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳು ದಕ್ಷಿಣಕ್ಕೆ ಪಶ್ಚಿಮಕ್ಕೆ ಮತ್ತು ವಾಯುವ್ಯ ಭಾಗಕ್ಕೆ ಹಾಸನ ಮತ್ತು ಚಿತ್ರದುರ್ಗ ಜಿಲ್ಲೆಗಳಿವೆ. ಪಶ್ಚಿಮದ ಮಧ್ಯಭಾಗದಲ್ಲಿ ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳಿಂದ ಸುತ್ತುವರಿದಿದೆ. ಜಿಲ್ಲೆಯು ಸಮುದ್ರ

ಮಟ್ಟದಿಂದ ೨,೭೦೦ ಅಡಿಗಳ ಎತ್ತರದಲ್ಲಿದೆ. ವಾತಾವರಣವು ಉಷ್ಣವಲಯದಿಂದ ಕೂಡಿದ್ದರೂ ಸಹ ದಕ್ಷಿಣದ ಸುಡು ಬಿಸಿಲಾಗಲಿ ಉತ್ತರದ ಉರಿಗಾಳಿಯಾಗಲಿ ಇಲ್ಲ, ಅತಿ ವೃಷ್ಟಿ ಅನಾವೃಷ್ಟಿಗಳಿಲ್ಲ.

ತುಮಕೂರು ಜಿಲ್ಲೆ ಬಯಲು ಪ್ರದೇಶವಾದರೂ ರಾಜ್ಯದ ಇತರೆ ಜಿಲ್ಲೆಗಳಿಗಿಂತ ವಿಭಿನ್ನ ಪ್ರಾಕೃತಿಕ ಲಕ್ಷಣಗಳಿಂದ ಕೂಡಿದೆ. ಬೆಟ್ಟ, ಗುಡ್ಡ, ಅರಣ್ಯ ಎತ್ತರವಾದ ತೋಪುಗಳಿವೆ. ದೇವರಾಯನ ದುರ್ಗ ಸಿದ್ಧರಬೆಟ್ಟಗಳು ಅರಣ್ಯದಿಂದ ಕೂಡಿದ್ದು ಗಿಡಮೂಲಿಕೆಗಳ ಆಗರವಾಗಿದೆ. ನಾಮದ ಚಿಲುಮೆಯು ಒಂದು ಪ್ರೇಕ್ಷಣೀಯ ಸ್ಥಳವಾಗಿದ್ದು ಜಿಂಕೆ ಮೊಲಗಳಂತಹ ಕಾಡು ಪ್ರಾಣಿಗಳನ್ನು ಕಾಣಬಹುದಾಗಿದೆ. ಅಲ್ಲದೆ ಶ್ರೀರಾಮನು ವನವಾಸದ ಸಂದರ್ಭದಲ್ಲಿ ನಾಮವನ್ನು ತೆಯ್ಯಲು ನೀರಿಲ್ಲದಾಗ ಬಾಣದಿಂದ ಹೊಡೆದು ನೀರು ತೆಗೆದನೆಂದು ಐತಿಹ್ಯವಿದೆ. ಆದ ಕಾರಣ ಆ ಸ್ಥಳವನ್ನು ನಾಮದ ಚಿಲುಮೆ ಎಂದು ಕರೆಯುತ್ತಾರೆ ಎಂಬ ಪ್ರತೀತಿ ಇಲ್ಲಿನ ವಾಯುಗುಣವು ಡಿಸೆಂಬರ್‌ನಿಂದ ಫಬ್ರುವರಿ ತಿಂಗಳವರೆಗೆ ತಂಪು ಹವೆ ಹೊಂದಿರುತ್ತದೆ. ಮಾರ್ಚ್‌ನಿಂದ ಮೇ ತಿಂಗಳವರೆಗ ಬಿಸಿ ಹವಾಗುಣವಿರುತ್ತದೆ. ಈ ಅವಧಿಯಲ್ಲಿ ಜೂನ್‌ನಿಂದ ಆಗಸ್ಟ್ ತಿಂಗಳವರೆಗೆ ಮಳೆಗಾಲವಿರುತ್ತದೆ.ಈ ಅವಧಿಯಲ್ಲಿ ಜೀವನಾಧಾರಕ್ಕಾಗಿ ವ್ಯವಸಾಯವನ್ನೇ ಅವಲಂಭಿಸಿರುವ ರೈತಾಪಿ ಜನರು ಬಿತ್ತನೆ ಹಾಗೂ ನಾಟಿ ಮಾಡುವ ಕಾಲವಾಗಿರುತ್ತದೆ. ಇವುಗಳಲ್ಲಿ ಮುಖ್ಯವಾಗಿ ರಾಗಿ, ಜೋಳ, ಹುರುಳಿ, ಬೆಳೆಗಳನ್ನು ಬೆಳೆಯುತ್ತಾರೆ. ಜಿಲ್ಲೆಯ ತೆಂಗು ಮತ್ತು ಅಡಿಕೆ ವಾಣಿಜ್ಯ ಬೆಳೆಯಾಗಿವೆ.

## ಜಿಲ್ಲೆಯ ಐತಿಹಾಸಿಕ ಹಿನ್ನಲೆ

ಕರ್ನಾಟಕದ ಉದ್ದಗಲಕ್ಕೂ ಪ್ರಾಗಿತಿಹಾಸ ಕಾಲದ ಚಿತ್ರಕಲೆಯ ಕುರುಹುಗಳು ಕಂಡು ಬಂದಿವೆ. ತಾನು ವಾಸಿಸುವ ಶಿಲಾಗುಹೆಗಳಲ್ಲಿ ಕುಟ್ಟಿದ, ಕೊರೆದ, ಹಾಗೂ ಬಣ್ಣದ ಚಿತ್ರಗಳನ್ನು ಬರೆದಿದ್ದಾನೆ. ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ಕಾಣುತ್ತೇವೆ. ಅದರಲ್ಲಿ ತುಮಕೂರು ಜಿಲ್ಲೆಯಲ್ಲಿಯೂ ಕೆಲವು ನೆಲೆಗಳಿವೆ. ಜಿಲ್ಲೆಯ ಕಿಬ್ಬನಹಳ್ಳಿ, ಬಿಳಿಗೆರೆಯು ಪ್ರಾಚೀನ ಬದುಕಿನ ಜನವಾಸ್ಥಳದ ಮುಖ್ಯ ನೆಲೆಯಾಗಿರುವುದು ಇಲ್ಲಿ ಸಿಕ್ಕಿರುವ ಆಧಾರಗಳಿಂದ ಮತ್ತೆ ಉತ್ಖನನದಲ್ಲಿ ದೊರಕಿರುವ ವಸ್ತುಗಳಿಂದ ಹಳೆಶಿಲಾಯುಗ, ಸೂಕ್ಷ್ಮಶಿಲಾಯುಗ, ನೂತನಶಿಲಾಯುಗ, ಶಿಲಾತಾಮ್ರಯುಗ, ಬೃಹತ್ ಶಿಲಾಯುಗ ಎಂದು ಪ್ರಾಚೀನ ಜನ ಜೀವನ ಶೈಲಿಯನ್ನು ವಿಂಗಡಿಸಲಾಗಿದ್ದು ಈ ಹಂತಗಳ ಜನರು ತುಮಕೂರು ಜಿಲ್ಲೆಯಲ್ಲಿ ವಾಸಿಸಿರುವುದು ತಿಳಿದು ಬಂದಿದೆ. ಇದರಿಂದ ತುಮಕೂರು ಜಿಲ್ಲೆಯು ಪ್ರಾಚೀನ ಕಾಲದಿಂದ ಜನವಾಸಿಸಲು ಯೋಗ್ಯವಾದ ವಾತಾವರಣ, ಜಲ, ಬೆಳೆಗಳನ್ನು ಬೆಳೆಯಲು ಯೋಗ್ಯವಾದ ಸ್ಥಳ ಎಂಬುದು ದೃಢಪಟ್ಟಿದೆ. ಹೀಗೆ ತುಮಕೂರಿನ ಜನವಾಸಿ ಇತಿಹಾಸವು ಪ್ರಾರಂಭವಾಗಿರುವುದು ಕೆಲವು ಆಯುಧಗಳು, ದಿನಬಳಕೆ ವಾಸ್ತುಗಳು ಕಲ್ಲಾಸರೆಯ ನೆಲೆಗಳು ಹಾಗೂ ಕೆಲವು ಶಾಸನಗಳಿಂದ ದೃಢಪಟ್ಟಿದೆ, ಜಿಲ್ಲೆಯ ಹತ್ತು ತಾಲ್ಲೂಕುಗಳಲ್ಲೂ ವಿವಿಧ ಸಾಂಸ್ಕೃತಿಕ ಹಂತದ ನೆಲೆಗಳನ್ನು ಗುರುತಿಸಲಾಗಿದೆ. ಹಲವಾರು ಸ್ಥಳಗಳು, ದೇವಾಲಯಗಳು, ಭಿತ್ತಿ ಚಿತ್ರಗಳು, ಜಾನಪದ ಕಲೆಗಳು

ತುಮಕೂರು ಜಿಲ್ಲೆಯ ಹಿರಿಮೆಯನ್ನು ಹೆಚ್ಚಿಸಿವೆ. ಅಲ್ಲದೆ ಶಿಲಾಯುಗಕ್ಕೆ ಸೇರಿದ ಕೆಲವು ಪ್ರದೇಶಗಳು, ರಾಮಾಯಣ ಮಹಾಭಾರತಗಳೊಂದಿಗೆ ಬೆಸೆದುಕೊಂಡಿರುವ ನೆಲೆಗಳು ತಿಳಿದು ಬರುತ್ತದೆ. ಅದಕ್ಕೆ ಉದಾಹರಣೆಯಾಗಿ ಕಡಬ, ನಾಮದ ಚಿಲುಮೆ, ಸಂಪಿಗೆ, ಇನ್ನು ಮುಂತಾದ ಪ್ರದೇಶಗಳು ವಿಶೇಷ ಪದನಾಮಗಳನ್ನು ಹೊಂದಿದ್ದು ಸಾಕ್ಷಿಯಾಗಿದೆ.

ಪ್ರತಿಯೊಂದು ಸ್ಥಳಗಳಿಗೂ ಅದರದೇ ಆದ ಸ್ಥಳ ಮಹಿಮೆ, ಐತಿಹ್ಯ ಪುರಾಣ ಪುಣ್ಯಕಥೆಗಳಿವೆ. ತುಮಕೂರು ಕ್ರಿ.ಶ. ೯೫೫ರ ಶಾಸನದಲ್ಲಿ 'ತುಮ್ಮಗೂರು' ಎಂದು ಕರೆಯಲ್ಪಟ್ಟಿದೆ. (ತುಮಕೂರು ತಾ|| ಶಾಸನ ೫) ಈ ಊರನ್ನ ೯೭೦ರಲ್ಲಿ ಗಂಗರಾಜಕಟ್ಟಿದ ಎಂದು ಹೇಳಲಾಗಿದೆ. ತುಮಕೂರಿನ ಕೆರೆಯವೊಳೆದೊ ಅಣ್ಯರ ಬೆಸದೊಳೆ ಕನ್ನಮ| ಮಕ್ಕಳ ಅಜ್ಜಮಯ್ಯ... ಎಂದಿದೆ. ಅಲ್ಲದೆ ತುಮ್ಮಗೂರು ಅದರ ಪ್ರಾಚೀನ ಹೆಸರು, ತುಮ್ಮೇಗುರು, ತುಂಬೆಗೂರು, ಎಂದು ಜನಪದ ವಾಡಿಕೆಯಲ್ಲಿ ಇರುವುದುಂಟು ತುಮ್ಕೆನಹಳ್ಳಿ ಅಂದರೆ, ತಮದೆ ನಗಾರಿ ಬಾರಿಸುವ ಹಳ್ಳಿ ಎಂಬ ವ್ಯಾಖ್ಯಾನ ಮಾಡಿಕರೆದುದುಂಟು, ತಮಟೆ ನಗಾರಿ ಯರ ಸಂಸ್ಪತಿಯು ಇಂದಿಗೂ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ದೇವಾಲಯಗಳ ಪೂಜಾ ವಿಧಿಯಾಗಿ, ಸಾಂಸ್ಕೃತಿಕ ಆಚರಣೆಯಾಗಿ ಮುಂದುವರೆದಿದೆ. ಈ ಪರಂಪರೆಯು ಗಂಗರ ಕಾಲದಿಂದ ಇತ್ತೆಂದು ಈ ಮೇಲಿನ ಶಾಸನದಿಂದ ತಿಳಿದುಬರುತ್ತದೆ. ಈಗಿರುವ ತುಮಕೂರು ಕೋಡಿಬಸವಣ್ಣನ ಗುಡಿಯ ಬಳಿ ಕೆರೆ ಅಥವಾ ಮರಳೂರು ಕೆರೆಯ ಬದಿಯಲ್ಲಿದ್ದ ಬಿಳಿ ಜಾಲಿ ಸ್ಥಳದ ತುಂಬಾ ಮರಳಿದ್ದ ಕಾರಣ ಹಾಗೂ ತುಂಬಿ ತುಳುಕುವ ಕಾರಣಕ್ಕೆ ಗ್ರಾಮೀಣ ಜನರು ನಿಸರ್ಗಕೊಟ್ಟಿರಬಹುದು ಮೂಲದ ಹೆಸರು ಹಾಗೂ ತುಂಚಿಯೂರು, ತುಂಮೆಯೂರು, ತುಮ್ಮೆಯೂರು, ತುಮ್ಮೆಗೂರು, ತುಮ್ಮೆಕೂರು, ತುಮ್ಮಕೂರು, ತುಮಕೂರು ಎಂಬ ರೂಪವನ್ನು ಪಡೆದಿದೆ. ಸದಾ ತುಂಬಿ ತುಳುಕುತ್ತಿದ್ದ ಕೆರೆಯ ಬದಿಯ ಊರನ್ನು ತುಮುಕುಹಳಿ (ತುಮುಕು=ತುಳುಕು) ತುಮಕೇನಹಳ್ಳಿ ಎಂಬ ಹೆಸರು ಕಾಲಾಂತರದಲ್ಲಿ ಬಾಯಿಂದ ಬಾಯಿಗೆ ಬದಲಾವಣೆಯನ್ನು ಹೊಂದಿ ತುಮಕೂರು ಆಗಿದೆ.

ತುಮಕೂರು ಜಿಲ್ಲೆಯಲ್ಲಿ ಪ್ರತ್ಯೇಕವಾಗಿ ಯಾವುದೇ ರಾಜಮನೆತನಗಳು, ಪಾಳೇಗಾರರು, ನೇರವಾದ ಆಳ್ವಿಕೆಯನ್ನ ನಡೆಸಿಲ್ಲವಾದರೂ ಹಲವಾರು ರಾಜಮನೆತನಗಳ ಆಡಳಿತಕ್ಕೆ ಒಳಪಟ್ಟಿತ್ತು. ಕರ್ನಾಟಕವನ್ನು ಆಳಿದ ರಾಜ ಮನೆತನಗಳಾದ ಗಂಗರು, ರಾಷ್ಟ್ರಕೂಟರು, ನೊಳಂಬರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಅರಸರು, ಹಾಗೂ ಪಾಳೇಗಾರರು ವಿವಿಧ ಪ್ರದೇಶಗಳನ್ನ ಆಡಳಿತಕ್ಕೆ ಒಳಪಡಿಸಿಕೊಂಡಿರುವುದು ಹಲವಾರು ಶಾಸನಗಳು, ತಾಮ್ರ ಪತ್ರಗಳು ವೀರಗಲ್ಲುಗಳು ಶಿಲಾಶಾಸನಗಳಿಂದ ತಿಳಿದು ಬರುತ್ತದೆ. ಇವುಗಳ ಆಧಾರದ ಮೇಲೆ ತುಮಕೂರು ಜಿಲ್ಲೆಯ ಪ್ರಾಚೀನ ಇತಿಹಾಸವನ್ನು ನಿರ್ಧರಿಸಲು ಸಹಕಾರಿಯಾಗಿದೆ. ತುಮಕೂರು ಜಿಲ್ಲೆಯು ಪ್ರಥಮವಾಗಿ ಗಂಗರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಕೆಲವು ಪ್ರದೇಶಗಳಲ್ಲಿ ದೊರೆತಿರುವ ಶಾಸನಗಳು ಆಧಾರವಾಗಿವೆ. ಕ್ರಿ.ಶ.೪೦೦ರ ಸುಮಾರಿಗೆ ಸೇರಿದ ಶಾಸನವೊಂದು ದೊರೆತಿದೆ. ಈ ಶಾಸನವನ್ನು ಬರೆಸಿದವನು ಮಾಧವವರ್ಮನೆಂಬ

ಅರಸು ಈ ಮಾಧವವರ್ಮನು ದಡಿಗ ದೊರೆಯ ಪುತ್ರನಾದ ಕಿರಯ ಮಾಧವ ಅಥವಾ ಎರಡನೇ ಮಾಧವನಿರಬಹುದು. ಈ ಮಾಧವವರ್ಮನು ಬೋಧಿಸತ್ವನೆಂಬ ಬೌದ್ಧ ಸನ್ಯಾಸಿಗೆ ಭೂಮಿಯನ್ನು ದಾನವಾಗಿ ನೀಡಿದನೆಂಬ ವಿಷಯ ಈ ಶಾಸನದಲ್ಲಿ ಉಲ್ಲೇಖವಾಗಿದೆ.[೪] ಗಂಗರನ್ನು ಮೊದಲುಗೊಂಡು ಮೈಸೂರು ಅರಸನ ತನಕ ಅಲ್ಲದೆ ಪಾಳೇಗಾರರ ಆಡಳಿತಕ್ಕೆ ಒಳಪಟ್ಟಿತ್ತು, ಮಧುಗಿರಿಯ ೯೯ನೇ ಶಾಸನ, ಸಿರಾದ ೧೨೩ನೇ ಶಾಸನ, ಕಿಬ್ಬನಹಳ್ಳಿಯ ೧೦೩ನೇ ಶಾಸನ, ಕೆರೆಗೋಡಿ ರಂಗಾಪುರದ ೧೪೦ರ ಶಾಸನಗಳು ಗಂಗರ ಹಳ್ಳಿಯ ತಮ್ಮ ಕೀರ್ತಿಯನ್ನು ಹೋರಾಡಿದ ಯುದ್ಧದ ಗೆಲುವಿನ ಕೆಲವು ಘಟನೆಗಳನ್ನು ನೆನಪಿಸುತ್ತವೆ. ತುಮಕೂರಿನ ಸೋಮೇಶ್ವರ ದೇವಾಲಯದ ಶಾಸನವು ಕ್ರಿ.ಶ.೯೫೫ರ ಕಾಲಕ್ಕೆ ಸೇರಿದ್ದು, ಈ ಶಾಸನವು ಭೂತುಗನ ಕಾಲದ್ದಾಗಿದ್ದು ತುಮಕೂರನ್ನು 'ತುಮ್ಮೆಗೂರು' ಎಂದು ಕರೆದಿರುವುದು ಅಲ್ಲದೆ ಕೆರೆಯನ್ನು ಕಟ್ಟಿಸಿದ್ದು ತಿಳಿಸುತ್ತದೆ.

ರಾಷ್ಟ್ರಕೂಟರ ಮೂರು ಶಾಸನಗಳು ದೊರೆತಿದ್ದು ಗುಟ್ಟೆಯ ೬೧ನೇ ಶಾಸನ ಮಹತ್ವವಾದ ಮಾಹಿತಿಯನ್ನು ನೀಡುತ್ತದೆ. ಹೇಮಾವತಿ ಬಳಿ ದೊರೆತ ಸಿರಾ ೨೭ನೇ ಶಾಸನವು ರಾಷ್ಟ್ರಕೂಟರ ಮೇಲೆ ಬೆಳಕು ಚೆಲ್ಲುವ ಶಾಸನವಾಗಿದೆ. ಕಲ್ಯಾಣ ಚಾಲುಕ್ಯರು ತುಮಕೂರು ಜಿಲ್ಲೆಯನ್ನು ಆಳಿದರೆಂಬುವುದಕ್ಕೆ ಪಾವಗಡ, ಶಿರಾ, ಚಿಕ್ಕನಾಯಕನಹಳ್ಳಿ, ತಿಪಟೂರು, ಗುಬ್ಬಿ ತಾಲ್ಲೂಕುಗಳಲ್ಲಿ ದೊರೆತಿರುವ ಶಾಸನಗಳು ಸ್ಪಷ್ಟಪಡಿಸುತ್ತವೆ. ನೊಳಂಬರ ೧೪ ಶಾಸನಗಳು ದೊರೆತಿದ್ದು, ೯-೧೦ನೇ ಶತಮಾನದಲ್ಲಿ ತುಮಕೂರು, ಬೆಂಗಳೂರು, ಬಳ್ಳಾರಿ, ಅನಂತಪುರ, ಚಿತ್ತೂರು, ಧರ್ಮಪುರಿ, ಕೋಲಾರ, ಜಿಲ್ಲೆಗಳು ನೊಳಂಬರ ಆಡಳಿತಕ್ಕೆ ಒಳಪಟ್ಟ ಜಿಲ್ಲೆಗಳಾಗಿದ್ದವು. ನೊಳಂಬರ ಅಧಿಕೃತ ದಾಖಲೆ ಕ್ರಿ.ಶ.೯೪೩ರದಾಗಿದ್ದು ಈ ಶಾಸನವು ಸಿರಾ ತಾಲ್ಲೂಕಿನಲ್ಲಿ ದೊರೆತಿದೆ. ಈ ಶಾಸನದಿಂದ ನೊಳಂಬರು ಈಶ್ವರನ ಆರಾಧಕರು ಎನ್ನುವುದು ತಿಳಿದು ಬರುತ್ತದೆ. ಚೋಳರ ಕ್ರಿ.ಶ.೧೧ನೇ ಶತಮಾನದಲ್ಲಿ ಪ್ರಾಬಲ್ಯವು ದಕ್ಷಿಣ ರಾಜ್ಯಗಳಲ್ಲಿ ಕಂಡುಬರುತ್ತದೆ. ಅದರಲ್ಲಿ ತುಮಕೂರು ಜಿಲ್ಲೆಯು ಚೋಳರ ಅಧೀನದಲ್ಲಿತೆಂದು ತಿಳಿದು ಬರುತ್ತದೆ.

ಹೊಯ್ಸಳರ ಕಾಲದ ಆಡಳಿತ ವ್ಯವಸ್ಥೆ ಮತ್ತು ಸಂಸ್ಕೃತಿಯನ್ನು ತಿಳಿಸುವ ೧೮೯ ಶಾಸನಗಳು, ಲಭ್ಯವಾಗಿವೆ. ವಾಸ್ತು ಶಿಲ್ಪ, ಹೊಯ್ಸಳರ ಉತ್ತಮ ಆಡಳಿತಕ್ಕೆ ಹಿಡಿದ ಕನ್ನಡಿಯಂತಿವೆ. ಬೇಲೂರಿನ ಚೆನ್ನಕೇಶವ ದೇವಾಲಯವನ್ನೇ ಹೋಲುವ ಅರಳುಗುಪ್ಪೆಯ ಚೆನ್ನಕೇಶವ ದೇವಾಲಯವು ನೋಡುಗರನ್ನು ಬೆರಗು ಗೊಳಿಸುತ್ತದೆ. ಹಾಗೂ ಜಿಲ್ಲಾದ್ಯಂತ ಹಲವಾರು ಸುಂದರ ವಾಸ್ತುಶಿಲ್ಪಗಳು ಕಂಡುಬರುತ್ತವೆ.

ಹೊಯ್ಸಳರ ನಂತರ ತುಮಕೂರು ವಿಜಯನಗರದ ಅರಸರಿಗೆ ಸೇರಿತು. ತುಮಕೂರು ಜಿಲ್ಲೆಯಲ್ಲಿ ಸುಮಾರು ೧೩೪ ಶಾಸನಗಳು ಈ ಕಾಲಾವದಿಯ ಶಾಸನಗಳಾಗಿವೆ. ಈ ಶಾಸನಗಳು ವಿಜಯನಗರದ ಅರಸರ ಶೌರ್ಯ ಪರಾಕ್ರಮಗಳನ್ನು, ವಶಪಡಿಸಿಕೊಂಡ ಪ್ರದೇಶಗಳು ಹಾಗೂ ವಿಜಯನಗರ ಪ್ರಾರಂಭಿಕ ವಂಶಾವಳಿಗಳ ಬಗ್ಗೆ ತಿಳಿಸುತ್ತವೆ. ಇವರ ಕಾಲಕ್ಕೂ ಉತ್ತಮ ವಾಸ್ತುಶಿಲ್ಪಗಳು ಕೋಟೆ ಕೊತ್ತಲುಗಳು

ನಿರ್ಮಾಣಗೊಂಡಿರುವುದನ್ನು ಈಗಲೂ ನೋಡಲುಬಹುದು. ಪಾವಗಡದ ಗಿರಿದುರ್ಗಗಳು ಪ್ರೇಕ್ಷರನ್ನ ತನ್ನತ್ತ ಸೆಳೆಯುತ್ತವೆ. ಹಲವಾರು ಸ್ಥಳಗಳನ್ನೇ ಒಟ್ಟುಗೂಡಿಸಿ ಸೀಮೆ ಎಂದು ಕರೆದರು ಬಿದುರು ಸೀಮೆ, ಮಲೆಯೂರು ಸೀಮೆ, ನೊಣಬಿನಕೆರೆ ಸೀಮೆ, ಬೂದಿಹಾಳು ಸೀಮೆ, ಶೆಟ್ಟಿಕೆರೆ ಸೀಮೆ, ಕಂದಿಕೆರೆ ಸೀಮೆ, ನಿಡಗಲ್ಲು ಸೀಮೆ, ಕೋಳಾಲ ಸೀಮೆ, ತಾವಡಿ ಗಟ್ಟಿಸೀಮೆ, ಗೂಳೂರು ಸೀಮೆ, ವಿರೂಪ ಸಮುದ್ರ ಸೀಮೆ, ಕಂಚಿಕಲ್ಲು ಸೀಮೆ, ಮಿಡಿಗೇಶಿ ಸೀಮೆ, ಸಿದ್ಧಾಪುರ ಸೀಮೆ, ರಾಮನಾಯ್ಕನ ಸೀಮೆ, ಆಲೂರು ಸೀಮೆ, ತುಮಕೂರು ಸೀಮೆ, ಹೊಳವನಹಳ್ಳಿಯ ಸೀಮೆ, ಹುಳಿಯಾರು ಸೀಮೆ, ಸಂಪಿಗೆ ಸೀಮೆ, ದೊಡ್ಡೇರಿ ಸೀಮೆ, ಹೆಂಜೇರು ಸೀಮೆ, ಹಿರಿಯರ ಸೀಮೆ, ದೇವಣಶಿರ್ಕ್ಯರ ಸೀಮೆ, ರತ್ನಗಿರಿ ಸೀಮೆ, ಪೈಸಳ ಸೀಮೆ, ಕೊರಟಗೆರೆ ಸೀಮೆ, ಶೂರಗಿರಿ ಸೀಮೆ, ಬರಗೂರು ಸೀಮೆಗಳೆಂದು ಕರೆಯುತ್ತಿದ್ದರು ಹಾಗೂ ಈ ಎಲ್ಲಾ ಸೀಮೆಗಳು ವಿಜಯನಗರ ಅರಸರ ಆಡಳಿತಕ್ಕೆ ಒಳಪಟ್ಟಿದ್ದವು. ಈ ಪ್ರದೇಶಗಳಲ್ಲಿ ಕಲಾತ್ಮಕವಾದ ಕೋಟೆ ಕೊತ್ತಲುಗಳು, ಬುರುಜುಗಳು, ಮಸೀದಿಗಳು ದೇವಾಲಯಗಳು, ಕೆರೆ ಕಟ್ಟೆ, ಬಾವಿಗಳು, ಭಿತ್ತಿ ಚಿತ್ರಗಳು, ಹಾಗೂ ವಿಶೇಷ ಸಂಸ್ಕೃತಿಯಿಂದ ಹೊರಹೊಮ್ಮಿವೆ ಅವುಗಳನ್ನು ಈಗಲೂ ಕಾಣಬಹುದು. ವಿಜಯನಗರದ ಅರಸರ ಪತನಾ ನಂತರ ಚಿಕ್ಕ ಪುಟ್ಟ ಸಂಸ್ಥಾನಿಕರು, ಪಾಳೇಗಾರರು ಸ್ವತಂತ್ರರಾಗಿ ಆಯಾ ಪ್ರದೇಶಗಳಲ್ಲಿ ತಮ್ಮದೇ ಆದ ರೀತಿಯಲ್ಲಿ ಸಂಸ್ಕೃತಿಯನ್ನು ಬೆಳೆಸಿರುವುದಲ್ಲದೆ ಅನೇಕ ದೇವಾಲಯಗಳು, ಕೋಟೆಗಳು ನಿರ್ಮಾಣವಾಗಿವೆ. ಹಾಗೂ ಅನೇಕ ದೇವಾಲಯಗಳಲ್ಲಿ ಭಿತ್ತಿ ಚಿತ್ರಗಳು ರಚನೆಗೊಂಡಿವೆ.

## ಜಿಲ್ಲೆಯ ವಾಸ್ತುಶಿಲ್ಪ

ತುಮಕೂರು ಜಿಲ್ಲೆಯು ಸಾಂಸ್ಕೃತಿಕವಾಗಿ ಶ್ರೀಮಂತವಾದ ಜಿಲ್ಲೆಯಾಗಿದೆ. ಈ ಜಿಲ್ಲೆಯು ವಾಸ್ತುಕಲೆಯಲ್ಲಿ ಮಹತ್ವದಸ್ಥಾನ ಪಡೆದಿದೆ. ಜಿಲ್ಲೆಯ ವಾಸ್ತು ಶೈಲಿಗೆ ಅನೇಕ ನಿರ್ಮಾಣಗಳು ಸಾಕ್ಷಿಯಾಗಿವೆ. ದೇವಾಲಯಗಳು, ಬಸದಿಗಳು ಕೋಟೆ-ಕೊತ್ತಲಗಳು, ಶಾಸನಗಳು ವಿಫುಲವಾಗಿ ದೊರೆಯುತ್ತವೆ. ಜಿಲ್ಲೆಯಲ್ಲಿ ವೈವಿಧ್ಯಮಯವಾದ ಅನೇಕ ದೇವಾಲಗಳು ನಿರ್ಮಾಣವಾಗಿರುವುದು ಕಂಡು ಬರುತ್ತದೆ. ಅನೇಕ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದರಿಂದ ಅನೇಕ ಶೈಲಿಗಳನ್ನ ಕಾಣಬಹುದಾಗಿದೆ. ಗಂಗರು, ಹೊಯ್ಸಳರು, ವಿಜಯನಗರದ ಅರಸರ ಕಾಲದ ದೇವಾಲಯಗಳು, ಕೋಟೆಕೊತ್ತಲ, ದರ್ಗಾಗಳನ್ನ ಕಾಣುತ್ತೇವೆ. ಮುಸ್ಲಿಂ ಶೈಲಿಯ ಕಟ್ಟಡಗಳು ವಿಫುಲವಾಗಿವೆ. ನೊಣವಿನ ಕೆರೆಯು ಒಂದು ಪುಟ್ಟ ಗ್ರಾಮವಾಗಿದ್ದು ಇಲ್ಲಿ ನೊಣಬೇಶ್ವರ, ಗರ್ಗೇಶ್ವರ, ಶಾಂತೀಶ್ವರ, ಜೋಳೇಶ್ವರ, ಮತ್ತು ಕಲ್ಲೇಶ್ವರ ಎಂಬ ಐದು ಶಿವಾಲಯಗಳಿದ್ದು ನೊಣಬೇಶ್ವರ ಮತ್ತು ಗರ್ಗೇಶ್ವರ ದೇವಾಲಯಗಳು ಬಹಳ ಪ್ರಾಚೀನವಾದ ಶೈಲಿಯಾಗಿವೆ. ಈ ದೇವಾಲಯಗಳು ಸುಂದರತೆಯಿಂದ ಕೂಡಿದ್ದು, ನವರಂಗ, ಮುಚ್ಚಿಕೆ, ಬಾಗಿಲುವಾಡ ಬಹಳ ಸುಂದರವಾಗಿ ಕೆತ್ತಲಾಗಿದೆ. ತಿಪಟೂರು ತಾಲ್ಲೂಕಿನ ಅರಳಗುಪ್ಪೆಯ ಕಲ್ಲೇಶ್ವರ ದೇವಾಲಯವು ಕ್ರಿ.ಶ.೯೫೦ರ ಕಾಲದ್ದು ಎಂದು ಹೇಳಲಾಗಿದೆ. ಈ ದೇವಾಲಯವು ಎರಡು ಜಾಲಾಂಧ್ರಗಳು ಹಾಗೂ ಉಬ್ಬು ಕೆತ್ತನೆಯಿಂದ ಕೂಡಿದೆ. ಇದೇ ರೀತಿ ಕುಣಿಗಲ್ ಸೋಮೇಶ್ವರ

ದೇವಾಲಯ, ತುರುವೇಕೆರೆ ತಾಲ್ಲೂಕಿನ ತಂಡಗ ಮಲ್ಲೇಶ್ವರ ದೇವಾಲಯ, ಸಿರಾ ತಾಲ್ಲೂಕಿನ ಬರಗೂರು ಈಶ್ವರ ದೇವಾಲಯಗಳು ಗಂಗರ ಕಾಲದ್ದಾಗಿವೆ. ಮಧುಗಿರಿ ತಾಲ್ಲೂಕಿನ ಶ್ರಾವಂಡಹಳ್ಳಿ ಮತ್ತು ಹಿರೇಗುಂಡಗಲ್ಲುನಲ್ಲಿ ಗಂಗರ ಶ್ರೀಪುರುಷನ ಕಾಲದ ಹತ್ತಾರು ವೀರಗಲ್ಲುಗಳಿವೆ. ವೀರಗಲ್ಲುಗಳು ತುಂಬ ಸುಂದರವಾಗಿದ್ದು ಶಿಲ್ಪಕಲೆಯ ದೃಷ್ಟಿಯಲ್ಲಿ ತುಂಬಾ ಮಹತ್ವದ್ದಾಗಿವೆ.

ಹುಳಿಯೂರಿನ ಮಲ್ಲೇಶ್ವರ ದೇವಾಲಯವು ಕಲ್ಯಾಣಿ ಚಾಲುಕ್ಯರ ಕಾಲದೆಂದು ಗುರುತಿಸಲಾಗಿದೆ. ಈ ದೇವಾಲಯದ ಕಾಲವನ್ನು ೧೧ನೇ ಶತಮಾನವೆಂದು ಹೇಳಬಹುದು. ಪಾವಗಡದ ನಿಡುಗಲ್ಲಿನಲ್ಲಿ ಚಾಲುಕ್ಯರ ನಗರೇಶ್ವರ ದೇವಾಲಯವಿದ್ದು ಈ ದೇವಾಲಯದ ಕಾಲವನ್ನು ೧೧೧೫ ಎಂದು ಗುರುತಿಸಲಾಗಿದೆ. ಈ ಮೇಲಿನ ದೇವಾಲಯಗಳು ಕೆಲವು ಶಿಥಿಲಾವಸ್ಥೆಯಲ್ಲಿದ್ದು ಕೆಲವು ದೇವಾಲಯಗಳು ಜೀರ್ಣೋದ್ಧಾರಗೊಂಡಿವೆ.

ಹೊಯ್ಸಳರ ಕಾಲದ ದೇವಾಲಯಗಳನ್ನ ನೆನಪು ಮಾಡುವ ಅತ್ಯಂತ ಕಲಾತ್ಮಕವಾದ ಅರಳಕುಪ್ಪೆಯ ಚನ್ನಕೇಶವ ದೇವಾಲಯವು ಹೊಯ್ಸಳರ ಕಲೆಗೆ ಹಿಡಿದ ಕನ್ನಡಿಯಂತಿದೆ. ಏಕಕೂಟ ದೇವಾಲಯವಾಗಿದ್ದು. ೧೩ನೇ ಶತಮಾನದ ಮಧ್ಯಭಾಗದಲ್ಲಿ ನಿರ್ಮಿಸಲಾಗಿದೆ. ರಾಮಾಯಣ-ಮಹಾಭಾರತ ಭಾಗವತ ಪುರಾಣದ ಕಥೆಯನ್ನು ಆಧರಿಸಿದ ಶಿಲ್ಪಗಳಿಂದ ಆವೃತಗೊಂಡಿದ್ದು ಸುಂದರ ಜಾಲಂದ್ರ ಹೊಂದಿದೆ. ಆನೆ, ಕುದುರೆ, ಹಂಸ, ಹೂ ಬಳ್ಳಿಗಳಿಂದ ಅಲಂಕೃತವಾಗಿದೆ.

ತುರುವೇಕೆರೆ ತಾಲ್ಲೂಕಿನ ತಂಡಗದ ಚನ್ನಕೇಶವ ದೇವಾಲಯ, ಹುಲಿಕಲ್ಲು ಸಂಗಮೇಶ್ವರ ಮತ್ತು ಮಲ್ಲೇಶ್ವರ, ವಿಘ್ನಸಂತೆ, ಲಕ್ಷ್ಮೀನರಸಿಂಹ ದೇವಾಲಯ, ಹೊಸಹಳ್ಳಿ ಕಲ್ಲೇಶ್ವರ ದೇವಾಲಯ, ಗೋಣಿತುಮಕೂರಿನ ಈಶ್ವರ ದೇವಾಲಯ, ಸೂಳೆಕೆರೆಯ ಈಶ್ವರ ದೇವಾಲಯ ಹಾಗೂ ತುರುವೇಕೆರೆಯ ಚೆನ್ನಿಗರಾಯ ಮತ್ತು ಶಂಕರೇಶ್ವರ ದೇವಾಲಯಗಳೂ ಕೂಡ ಹೊಯ್ಸಳರ ಕಾಲದ ಸುಂದರ ದೇವಾಲಯಗಳಾಗಿವೆ.

ತುಮಕೂರಿನ ಕೈದಾಳ ಗ್ರಾಮದ ಚನ್ನಕೇಶವ ದೇವಾಲಯ ಚಿಕ್ಕನಾಯಕನ ಹಳ್ಳಿಯ ಶೆಟ್ಟಿಕೆರೆಯ ಯೋಗ ಮಾಧವ ದೇವಾಲಯ, ದಬ್ಬೆ ಘಟ್ಟದ ಮಹಲಿಂಗೇಶ್ವರ ದೇವಾಲಯಗಳು, ಹೊಯ್ಸಳರ ಕಾಲದ ಕಲೆ ವಾಸ್ತುಶಿಲ್ಪ ಶೈಲಿ ಪ್ರತಿಬಿಂಬಿಸುತ್ತವೆ.

ತುಮಕೂರು ಜಿಲ್ಲೆಯಲ್ಲಿ ಜೈನ ಬಸದಿಗಳನ್ನೂ ಕಾಣಬಹುದು. ಹೊಯ್ಸಳ ಕಾಲದ ಬಸದಿಗಳು ಹೆಚ್ಚು ಕಂಡು ಬರುತ್ತವೆ. ಮತ್ತು ಕೆಲವು ಶಾಸನಗಳ ಆಧಾರದ ಮೇಲೆ ಪಂಡಿತನಹಳ್ಳಿಯ ಮಂದರಗಿರಿ ಬೆಟ್ಟ, ಚಿಕ್ಕನಾಯಕನಹಳ್ಳಿ ಹಟ್ಟದಲ್ಲಿ ಹೆಗ್ಗೆಯಲ್ಲಿ ಪಾವಗಡದ ನಿಡಗಲ್ ಬೆಟ್ಟ, ತಿಪಟೂರು, ಕಡಬ, ಹೀಗೆ ಅನೇಕ ಬಸದಿಗಳು ಇದ್ದವು ಎಂದು ತಿಳಿಸುತ್ತದೆ. ಆದರೆ ಅವುಗಳು ನಾಶವಾಗಿವೆ. ಪ್ರಸ್ತುತ ನಿಟ್ಟೂರಿನ ಶಾಂತೇಶ್ವರ ಬಸದಿ, ಹೆಗ್ಗೆರೆಯ ಚನ್ನಪಾರ್ಶ್ವನಾಥಸ್ವಾಮಿ ದೇವಾಲಯ ಹೊಯ್ಸಳ ಮಾದರಿಯ ಸುಂದರ ಬಸದಿಗಳನ್ನ ಕಾಣುತ್ತೇವೆ. ನಿಟ್ಟೂರಿನ ಶಾಂತೇಶ್ವರ ಬಸದಿಯು ಅತ್ಯಂತ ಸುಂದರವಾದ ಬಸದಿಯಾಗಿದೆ.

ವಿಜಯನಗರ ಕಾಲದ ದೇವಾಲಯಗಳು ಜಿಲ್ಲೆಯಲ್ಲಿ ಅತಿಹೆಚ್ಚು ನಿರ್ಮಾಣವಾಗಿರುವುದನ್ನು ಕಾಣಬಹುದು. ತುಮಕೂರಿನ ಲಕ್ಷ್ಮೀಕಾಂತಸ್ವಾಮಿ ದೇವಾಲಯ, ಎಡೆಯೂರು ಸಿದ್ಧಲಿಂಗೇಶ್ವರ ದೇವಾಲಯ, ಯಳನಾಡು ಸಿದ್ಧರಾಮೇಶ್ವರ ದೇವಾಲಯ, ಅಮೃತಪುರದ ಚೆನ್ನಕೇಶವ ದೇವಾಲಯ, ನೋವಿನಕೆರೆಯ ಬೇಟೆರಾಯ ದೇವಾಲಯ, ದೊಡ್ಡದಾಳವಟ್ಟದ ಲಕ್ಷ್ಮೀನರಸಿಂಹ ದೇವಾಲಯ, ಚಿಕ್ಕನಾಯಕನಹಳ್ಳಿ ವೆಂಕಟರಮಣ ದೇವಾಲಯ, ಪಂಕಜಹಳ್ಳಿಯ ಮಲ್ಲಿಕಾರ್ಜುನ ದೇವಾಲಯ, ಕಡಬದ ರಾಮದೇವಾಲಯ, ಗುಬ್ಬಿಯ ಗದ್ದೆ ಮಲ್ಲೇಶ್ವರ ದೇವಾಲಯ, ಹೊನ್ನೆಬಾಗಿ ಚೆನ್ನಕೇಶವ ದೇವಾಲಯ, ಹೊರಮನೆ ಕಾವಲ್ ಕೇಶವ ದೇವಾಲಯ, ಕೈದಾಳದ ಚನ್ನಕೇಶ್ವರ ದೇವಾಲಯ, ಅಮೃತೂರಿನ ಚನ್ನಕೇಶವ ದೇವಾಲಯಗಳ ಹೊರ ಭಾಗ, ಒಡೇರಹಳ್ಳಿ ಶಾಂತಮಲ್ಲಪ್ಪ ದೇವಾಲಯ, ಮಧುಗಿರಿಯ ವೆಂಕಟರಮಣದೇವಾಲಯ, ತುಂಗವಟೆಯ ರಂಗನಾಥ ದೇವಾಲಯ, ಮಿಡಿಗೇಶಿಯ ಮಲ್ಲೇಶ್ವರ ದೇವಾಲಯ, ಕುಡೂನೆಹಳ್ಳಿ ವೇಣುಗೋಪಾಲಸ್ವಾಮಿ ದೇವಾಲಯ, ಕಡಗತ್ತೂರಿನ ಜನಾರ್ಧನ ದೇವಾಲಯ ತುಮಕೂರಿನ ಚಿಕ್ಕಪೇಟೆಯಲ್ಲಿರುವ ಶ್ರೀಕಂಟೇಶ್ವರ ದೇವಾಲಯ ಮೊದಲಾದ ದೇವಾಲಯಗಳು ವಿಜಯನಗರ ಶೈಲಿಯ ದೇವಾಲಯಗಳಾಗಿವೆ.

ವಿಜಯನಗರದ ಕಾಲದ ಬಸದಿಗಳನ್ನು ನಿಡಗಲ್ಲು ಮಧುಗಿರಿ, ಕಂಚ್ಯಾಂಣಿ, ತೋವಿನಕೆರೆ, ಬಿದರೆ, ಮಡಿಗೇಶಿ, ಮಾಯಸಂದ್ರ, ರಾಂಪುರಗಳಲ್ಲೂ ಬಸದಿಗಳಿವೆ ಆದರೆ ಎಲ್ಲಾ ಬಸದಿಗಳೂ ನವೀಕೃತಗೊಂಡಿವೆ.

ಅಲ್ಲದೆ ಪಾಳೆಗಾರಾರ ಕಾಲದ ದೇವಾಲಯಗಳು, ಬಸದಿಗಳು, ಕೋಟೆಗಳು, ನಿರ್ಮಾಣಗೊಂಡಿವೆ. ತುಮಕೂರು ಜಿಲ್ಲೆಯ ಕೋಟೆಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದಾಗಿದೆ. ಒಂದು ಗಿರಿದುರ್ಗ, ಎರಡು ನೆಲದುರ್ಗ, ನೆಲದುರ್ಗಕ್ಕಿಂತ ಹೆಚ್ಚಾಗಿ ಗಿರಿದುರ್ಗಗಳನ್ನು ಕಾಣಬಹುದಾಗಿದೆ. ಅವುಗಳಲ್ಲಿ ನಿಡಗಲ್ಲುದುರ್ಗ, ಮಧುಗಿರಿಕೋಟೆ, ಪಾವಗಡ ಕೋಟೆ, ಮಿಡಿಗೇಶಿ ಕೋಟೆ, ಕೊರಟಗೆರೆ ಕೋಟೆ, ಚನ್ನರಾಯದುರ್ಗ, ದೇವರಾಯನದುರ್ಗ ಕೋಟೆ, ಹುಲಿಯೂರು ದುರ್ಗ, ಹುತ್ತರಿದುರ್ಗ. ಭಸ್ಮಾಂಗಿದುರ್ಗ, ಬಂಗಾರನಾಯಕನ ಬೆಟ್ಟ, ಬೇಡತ್ತೂರು ದುರ್ಗಗಳಾಗಿವೆ. ಅತ್ಯಂತ ಎತ್ತರವಾದ ಬೆಟ್ಟಗಳ ಮೇಲೆ ಅತ್ಯಂತ ರಮಣೀಯ ಸ್ಥಳಗಳಲ್ಲಿ ಸುಂದರವಾದ ಕೋಟೆಗಳು ಮತ್ತು ದೇವಾಯಗಳನ್ನು ನಿರ್ಮಿಸಲಾಗಿದೆ. ಅವುಗಳಲ್ಲಿ ಮಧುಗಿರಿ ಬೆಟ್ಟ, ನಿಡುಗಲ್ ಬೆಟ್ಟ, ಮಿಡಿಗೇಶಿ ಕೋಟೆಗಳು ಅತ್ಯಂತ ಸುಂದರವಾದ ವಾತಾವರಣದಲ್ಲಿ ನಿರ್ಮಾಣಗೊಂಡಿವೆ. ಹಾಗೂ ಹಲವಾರು ವಿಶೇಷತೆಗಳಿಂದ ಕೂಡಿದ ಕೋಟೆಗಳಾಗಿವೆ.

ಹಾಗೆಯೇ ನೆಲದುರ್ಗಕೋಟೆಗಳು ಶಿರಾದ ಕೋಟೆ, ಸಿದ್ದಾಪುರದ ಕೋಟೆ, ಹಾಗಲವಾಡಿಯ ಕೋಟೆ, ಹಾಗೂ ಕೊಡಗ ದಾಲ ಕೋಟೆ ಎಂದು ಗುರುತಿಸಲಾಗಿದೆ. ನೆಲದುರ್ಗಗಳೂ ಕೂಡ ಕಲಾತ್ಮಕ ಕೆತ್ತನೆಯಿಂದ ಕೂಡಿದ ಕೋಟೆಗಳಾಗಿವೆ. ಆದರೆ ನೆಲದುರ್ಗಗಳು ಗಿರಿದುರ್ಗಗಳಷ್ಟು ಸುವ್ಯವಸ್ಥೆಯಲ್ಲಿಲ್ಲ ಬಹುತೇಕ ಹಾಳಾಗಿವೆ. ಕಾರಣ ಸ್ಥಳೀಯರು ತಮ್ಮ ಸ್ವಂತಕ್ಕಾಗಿ ಬೇಕಾದ ಉಪಯುಕ್ತ ವಸ್ತುಗಳನ್ನು ಕಿತ್ತು ಬಳಸಿಕೊಂಡಿರುವುದು ಕೋಟೆಯ ನಾಶಕ್ಕೆ ಕಾರಣವಾಗಿದೆ.

## ಅಡಿಟಿಪ್ಪಣಿ

೧. ಕವಿತಾಕೃಷ್ಣ, ಸೃಜನ ಸಿರಿ, ಪುಟ-೨೦

೨. ಡಾ.ಸಿ.ಎಂ.ಲಕ್ಷ್ಮಿ, ಸೃಜನಸಿರಿ ತುಮ್ಮೆಗೂರು, ಪುಟ-೦೩

# ತುಮಕೂರು ಜಿಲ್ಲೆ ಭಿತ್ತಿ ಚಿತ್ರಗಳ ನೆಲೆಗಳು ಮತ್ತು ವರ್ಗೀಕರಣ

ತುಮಕೂರು ಜಿಲ್ಲೆಯು ಹತ್ತು ತಾಲ್ಲೂಕುಗಳಿಂದ ಕೂಡಿದ್ದು ಈ ಎಲ್ಲ ತಾಲ್ಲೂಕುಗಳು ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ಹಾಗೂ ಶೈಕ್ಷಣಿಕವಾಗಿ, ತನ್ನದೆ ಆದ ಮಹತ್ವವನ್ನು ಹೊಂದಿವೆ.

ಕೆಲವು ತಾಲೂಕುಗಳು ಪ್ರಾಚೀನ ಭಿತ್ತಿಚಿತ್ರಗಳನ್ನು ಹೊಂದಿದ್ದು ಕಲಾ ಮಹತ್ವ ಪಡೆದುಕೊಂಡಿವೆ. ಜಿಲ್ಲಿಯ ಭಿತ್ತಿಚಿತ್ರಗಳು ಮನೆ, ಮಠ, ಅರಮನೆ, ಚರ್ಚು, ಮಸೀದಿ, ದೇವಾಲಯ ಮುಂತಾದ ಕಡೆಗಳಲ್ಲಿ ರಚನೆಯಾಗಿದ್ದು ಶೈವ, ವೈಷ್ಣವ, ಶಾಕ್ತ ಹೀಗೆ ಹಲವಾರು ಧರ್ಮದ ಹಿನ್ನೆಲೆ ಹೊಂದಿವೆ. ಹೀಗೆ ವೈವಿಧ್ಯಮಯವಾದ ಜಿಲ್ಲೆಯ ಭಿತ್ತಿ ಚಿತ್ರಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಒಟ್ಟಾರೆ ಜಿಲ್ಲೆಯ ಭಿತ್ತಿಗಳ ನೆಲೆಯನ್ನ ಈ ಕೆಳಕಂಡಂತೆ ಸಂಕ್ಷಿಪ್ತವಾಗಿ ವಿವರಿಸಿಲಾಗಿದೆ. ಇಲ್ಲಿ ಪ್ರಸ್ತು ಭಿತ್ತಿ ಚಿತ್ರಗಳಿರುವ ನೆಲೆಗಳು ಹಾಗೂ ಹಿಂದೆ ಇದ್ದ ಭಿತ್ತಿ ಚಿತ್ರಗಳ ನೆಲೆಗಳನ್ನು ಒಟ್ಟಾರೆಯಾಗಿ ಗಮನಿಸಲಾಗಿದೆ.

೧ ತುಮಕೂರು ನಲ್ಲಪ್ಪನವರ ಮನೆ,

೨ ಕೆರೆಗೋಡಿ ರಂಗಾಪುರ,

೩ ಸೀಬಿ

೪ ಶಿರಾ

೫ ಬೆನಕನಕೆರೆ

೬ ಅಮೃತೂರು

೭ ಮಾಗಡಿ ರಂಗನಾಥ

೮ ಹಾಗಲವಾಡಿ

೯ ಯಡೆಯೂರು

೧೦ ಯಳನಡು

೧೧ ಮಿಂಚ ಕಲ್ಲು

೧೨ ಹೆಬ್ಬೂರು

## ೧. ತುಮಕೂರು ನಲ್ಲಪ್ಪನವರ ಮನೆ

ತುಮಕೂರು ಕೆರೆಕೋಡಿ ಎದುರು ಲಕ್ಷ್ಮಿ ನರಸಿಂಹ ದೇವಾಲಯದ ಪಕ್ಕದಲ್ಲಿರುವ ಮನೆಯೊಂದು ಹಿಂದೆ ಹೈದರಾಲಿಯ ಕಾಲದಲ್ಲಿ ಪೌಜುದಾರನಾಗಿದ್ದ ನಲ್ಲಪ್ಪನ ತಂದೆ ಕಛೇರಿ ಕೃಷ್ಣಪ್ಪನವರ ಮನೆಯಾಗಿತ್ತು. ನಲ್ಲಪ್ಪ ಇದನ್ನು ಚಿತ್ರದ ಮನೆಯನ್ನಾಗಿಸಿದ್ದರು. ಮನೆಯ ಗೊಡೆ, ಛಾವಣಿ, ತೊಲೆಗಳು ಚಿತ್ರಗಳಿಂದ ತುಂಬಿ ಹೋಗಿದ್ದವು. ಈ ಮನೆಯು ಹಜಾರ ಮತ್ತು ಹಲವಾರು ಕೋಣೆಗಳಿಂದ ಕೂಡಿತ್ತು ಇಲ್ಲಿನ ಸ್ಥಳಕ್ಕೆ ಅನುಗುಣವಾದ ಚಿತ್ರಗಳು ಇದ್ದವು. ಅಂದರೆ ದೇವತೆಯರ ಚಿತ್ರಗಳು ಯುದ್ಧದ ದೃಶ್ಯ, ಜಲಕ್ರೀಡೆ, ಜಲಚರ ಪ್ರಾಣಿಗಳು ಹಾಗೂ ರತಿಲಾಸ್ಯ ಚಿತ್ರಗಳಿಂದ ಕೂಡಿದ್ದವು. ಅವುಗಳಲ್ಲಿ ಮೇಲ್ಛಾವಣಿ ಮತ್ತು ಗೋಡೆಗಳ ಮೇಲಿನ ನೂರಾರು ಚಿಕ್ಕ ಚಿಕ್ಕ ಅಂಕಗಣಗಳಲ್ಲಿ ಚಿತ್ರಿಸಲಾಗಿತ್ತು. ಶೃಂಗೇರಿ ಶಾರದೆ, ಹಲವಾರು ಭಂಗಿಯಲ್ಲಿ ತಪಸ್ಸು ಮಾಡುತ್ತಿರುವ ಋಷಿಗಳ ಸಮೂಹ, ನದಿ ಪ್ರದೇಶ ಅದರೊಳಗೆ ಜಲಚರ ಪ್ರಾಣಿಗಳು, ಸುಂದರ ಹಸಿರು ಉದ್ಯಾನ, ಮರ, ಹೂ, ಬಳ್ಳಿ, ಲತೆಗಳ ಚಿತ್ರಗಳಲ್ಲದೆ, ನವಗ್ರಹಗಳು, ಗಣೇಶ, ಶಿವ, ವಿಷ್ಣುವಿನ ವಿವಿಧ ಅವತಾರಗಳು ಹಾಗೂ ದೇವಾನು ದೇವತೆಗಳ ಚಿತ್ರಗಳು ಇವೆ. ರಥಾ ರೂಢವಾಗಿ ಸೈನಿಕರೊಂದಿಗೆ ಯುದ್ಧಕ್ಕೆ ಹೊರಟ ರಾಜ ಪರಿವಾರದ ಸುಂದರ ದೃಷ್ಯಗಳು ಹಾಗೂ ರತಿಲಾಸ್ಯಕ್ಕೆ ಸಂಬಂಧಿಸಿದ ಕಲೆ ಅಲ್ಲಿ ಅರಳಿದೆ. ವಿಶೇಷವಾಗಿ ದಕ್ಷಿಣ ಭಾಗದ ಪಟ್ಟಿಕೆಯಲ್ಲಿ ರತಿಕ್ರೀಡೆಯಲ್ಲಿ ತೊಡಗಿರುವ ಸ್ತ್ರೀ-ಪುರುಷರ ಚಿತ್ರಗಳಿವೆ. ಸಾಲಂಕೃತ ಮೆತ್ತನೆಯ ಹಾಸಿಗೆಯ ಮೇಲೆ ವಸ್ತ್ರ ಧಾರಿಗಳಾಗಿ ವಿವಿಧ ಭಂಗಿಯಲ್ಲಿ ರತಿಕ್ರೀಡೆಯಲ್ಲಿ ತೊಡಗಿರುವ ಮನಮೋಹಕ ಚಿತ್ರಗಳಿವೆ.

ನಲ್ಲಪ್ಪನವರು ಹೈದರಾಲಿಯ ಕಾಲದಲ್ಲಿ ಪೌಜುದಾರನಾಗಿ ಸೇವೆ ಸಲ್ಲಿಸುತ್ತಿದ್ದರು, ಆಗ ಮೈಸೂರು ಕಲೆಯ ತವರೂರಾಗಿತ್ತು. ವಿಜಯನಗರದ ಕಲಾವಿದರು ಚಿತ್ರಕಲೆಯಲ್ಲಿ ನಿಪುಣರಾದ್ದರಿಂದ ಅವರಿಗೆ ಅರಸರ ಪ್ರೋತ್ಸಾಹವು ಅಷ್ಟೇ ಹೇರಳವಾಗಿತ್ತು. ನಲ್ಲಪ್ಪ ತಂದೆ ಕಛೇರಿ ಕಷ್ಣಪ್ಪ. ಬಹಳ ಪರಾಕ್ರಮಿ, ಶೂರ, ದಿಟ್ಟ, ಪೌಜುದಾರ ಎಂದು ಹೆಸರು ಪಡೆದಿದ್ದ. ಇವರ ಕಾಲಕ್ಕೆ ಸೀಬಿ ದೇವಾಲಯವನ್ನು ಜೀರ್ಣೋದ್ದಾರ ಮಾಡಿದರು ಈ ಸಂದರ್ಭದಲ್ಲಿ ಚಿತ್ರ ಬರೆಸಿ ಕೆಲವು ಶಾಸನ ಪಾಠಗಳನ್ನು ಬರೆಯಿಸಿದ್ದಾನೆ. ಮೈಸೂರಿನಿಂದ ಚಿತ್ರಕಲಾವಿದರನ್ನು ಕರೆಯಿಸಿ ಚಿತ್ರ ರಚನೆ ಮಾಡಿಸಿದ್ದಾರೆ. ಅವರಿಗೆ ಈ ರೀತಿಯ ಚಿತ್ರ ರಚನೆಗೆ ಪ್ರೇರಣೆ ಮೈಸೂರಿನ ಚಿತ್ರ ವಾತಾವರಣವೇ ಕಾರಣವಾಗಿದೆ.

### ಕೆರೆಗೋಡಿ

ಕೆರೆಗೋಡಿ ಮತ್ತು ರಂಗಾಪುರ ಕ್ಷೇತ್ರವು ತಿಪಟೂರು ತಾಲ್ಲೂಕಿನಲ್ಲಿರುವ ಒಂದು ಪುಣ್ಯಕ್ಷೇತ್ರ. ಇದು ಸುಮಾರು ನಾಲ್ಕುನೂರು ವರ್ಷಗಳ ಇತಿಹಾಸವುಳ್ಳದ್ದು. ಕೆರೆಗೋಡಿ ಮತ್ತು ರಂಗಾಪುರದ ಪ್ರತ್ಯೇಕ ಘಟಕಗಳು ಎಂದು ಭಾವಿಸಿಲು ಸಾಧ್ಯವಾಗದಂತೆ ಬೆಸೆದು ಹೋಗಿವೆ. ಈ ಎರಡು ಊರುಗಳ ನಡುವೆ

ಭೌತಿಕ ಅಂತರ ಕೇವಲ ಒಂದುವರೆ ಕಿ.ಮೀ. ಕೆರೆಗೋಡಿಯ ಶ್ರೀ ಶಂಕರೇಶ್ವರ ದೇವಾಲಯ ಮತ್ತು ರಂಗಾಪುರದ ಶ್ರೀ ರಂಗನಾಥ ಸ್ವಾಮೀ ದೇವಾಲಯ ಈ ಎರಡು ದೇವಾಲಯಗಲು ಈ ಊರುಗಳ ಬೆಸುಗೆಗೆ ಕಾರಣವಾಗಿವೆ. ಆದ್ದರಿಂದಲೇ ಕೆರೆಗೋಡಿ ಮತ್ತು ರಂಗಾಪುರ, ಶೈವ ವೈಷ್ಮವ ಎರಡೂ ಮತಗಳ ಸಾಮರಸ್ಯಕ್ಕೆ ಉದಾಹರಣೆಯಾಗಿರುವುದು. ಈ ಎರಡೂ ಪ್ರದೇಶಗಳು ತಮ್ಮದೇ ಆದ ಐತಿಹ್ಯವನ್ನು ಒಳಗೊಡಿದೆ. ಈ ಊರು ಹರಿಹರ ಸಂಗಮವಾಗಿದ್ದರಿಂದ ಅಂದರೆ ರಂಗನ ಜೊತೆ ಲಿಂಗ ಸೇರಿರುವುದರಿಂದ "ರಂಗಾಲಿಂಗಾ ಪುರ" ಎಂದು ಹೆಸರು ಬಂದಿದೆ. ಇಲ್ಲಿ ರಂಗನಾಥ ಮತ್ತು ಶಂಕರಲಿಂಗ ಅದಿದೈವವಾದರಿಂದ್ದ ಒಂದು ದೇವರಿಗೆ ನೆಡೆದುಕೊಂಡ ಮೇಲೆ ಮತ್ತೊಂದು ದೇವರಿಗೂ ನೆಡೆದುಕೊಳ್ಳಬೇಕೆಂಬ ಐತಿಹ್ಯ ಇದೆ. ಇದರಲ್ಲಿ ತಾರತಮ್ಯ ಇಲ್ಲ. ಇದು ತಿಪಟೂರಿನಿಂದ ಸುಮಾರು ೩ ಕಿ.ಮೀ ಅಂತರವಿದ್ದು ಸುಂದರ ಐತಿಹಾಸಿಕ ಗ್ರಾಮವಾಗಿವೆ. ಕೆರೆಗೋಡಿಯನ್ನು ಪ್ರವೇಶಿಸುತ್ತಿದಂತೆಯೇ ನಮಗೆ ಕಾಣುವುದು ಶಂಕರೇಶ್ವರ ದೇವಾಲಯ. ದೇವಾಲಯವು ಒಂದು ಉಪ್ಪರಿಗೆ ಮಂಟಪ, ಎರಡು ಸುಂದರ ದೀಪಸ್ತಂಭಗಳನ್ನು ಹೊಂದಿದೆ. ಪ್ರವೇಶ ದ್ವಾರವು ವಿಶಾಲವಾಗಿದ್ದು ಸುಮಾರು ೨೧/೨ ಅಡಿ ಎತ್ತರದ ಜಗಲಿಯ ಪಡಸಾಲೆ ಇದೆ.ಈ ಪಡಸಾಲೆಯ (ಚಂದ್ರಹಾಸ) ಛಾವಣಿಯನ್ನು ಮೂರು ಅಂಕಣಗಳಾಗಿ ವಿಂಗಡಿಸಿ ಶೈವ ಮತ್ತು ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಭಿತ್ತಿ ಚಿತ್ರಗಳನ್ನು ಅಲ್ಲಿ ಚಿತ್ರಿಸಲಾಗಿದೆ. ದೇವಾಲಯದ ಎಡಭಾಗದಿಂದ ಮೊದಲು ಗೊಂಡು ಮೊದಲನೇ ಅಂಕಣದಲ್ಲಿ ರಾಮಾಯಣ ವಿಷಯಕ್ಕೆ ಸಂಬಂಧಿಸಿದ ದೃಶ್ಯಗಳಿಂದ ಕೂಡಿವೆ. ರಾಮಾಯಣದ ದೃಶ್ಯಗಳನ್ನು ಚಿತ್ರಿಸಲು ಛಾವಣಿಯನ್ನು ಒಂದೊಂದು ಚಿಕ್ಕ ಚಿಕ್ಕ ವಿಭಾಗಗಳಾಗಿ ವಿಂಗಡಿಸಿಕೊಂಡು ಪ್ರತಿಯೊಂದು ಚೌಕದಲ್ಲೂ ಒಂದೊಂದು ದೃಶ್ಯವನ್ನು ಚಿತ್ರಿಸಲಾಗಿದೆ. ಸುತ್ತಲೂ ಇರುವ ತೊಲೆಗಳಲ್ಲಿ ಹತ್ತಾರು ಚಿತ್ರಗಳು ಹೊಂದಾಣಿಕೆಯಾಗುವ ರೀತಿಯಲ್ಲಿ ಆಯಾ ಸಂದರ್ಭಕ್ಕೆ ಸಂಬಂದಿಸಿದಂತೆ ಸಂಖ್ಯೆಯನ್ನು ಹಾಗೂ ಸ್ಥಳದ ಅಳತೆಗೆ ಹೊಂದಿಕೆಯಾಗಿರುವಂತೆ ಚಿತ್ರಗಳನ್ನು ಸಂಯೋಜಿಸಲಾಗಿದೆ. ಪ್ರತಿಯೊಂದು ಅಂಕಣದಲ್ಲೂ ಇರುವ ಚಿತ್ರಗಳ ಅವತಾರ ಅಥವಾ ಸಂದಂರ್ಭವನ್ನು ಅಕ್ಷರಗಳಲ್ಲಿ ಬರೆದಿರುವುದು ವಿಶೇಷವಾಗಿದೆ. ಈ ಅಂಕಣದಲ್ಲಿ ಚಿತ್ರಿಸಲಾದ ಚಿತ್ರಗಳು ಸಂಪ್ರದಾಯಿಕ ಶೈಲಿಯ ಶಿಸ್ತು ಬದ್ಧ ಆಕಾರಗಳಲ್ಲಿವೆ. ಮತ್ತೆ ಕೆಲವು ಚಿತ್ರಗಳು ಜನಪದೀಯವಾದ ರೇಖಾ ವಿನ್ಯಾಸ ಬಣ್ಣಗಾರಿಕೆ ಹಾಗೂ ಸಂಯೋಜನೆ ಹೊಂದಿವೆ. ಅಂಕಣದ ಮಧ್ಯಭಾಗದಲ್ಲಿ ಚಿಕ್ಕ ಚಿಕ್ಕ ಅಂಕಣಗಳಲ್ಲಿ ವಿಷ್ಣುವಿನ ಅವತಾರವನ್ನು ಚಿತ್ರಿಸಿದ್ದು ಸಾಮಾನ್ಯವಾಗಿ ವಿಷ್ಣುವಿನ ದಶಾವತಾರ ಚಿತ್ರಗಳನ್ನು ಕಾಣಬಹುದಾಗಿದೆ. ಆದರೆ ಇಲ್ಲಿ ಹತ್ತರ ಜೊತೆಗೆ ಎರಡು ಚಿತ್ರಗಳನ್ನು ಸೇರಿಸಿರುವುದು ಕಂಡು ಬರುತ್ತದೆ. ಬುದ್ಧ ಮತ್ತು ಬಲರಾಮನ ಚಿತ್ರವು ಹತ್ತರ

ಜೊತೆ ಸೇರ್ಪಡೆಯಾದ ಚಿತ್ರಗಳಾಗಿವೆ. ದಶಾವತಾರ ಚಿತ್ರದಲ್ಲಿ ಎರಡು ಹೆಚ್ಚುವರಿ ಏಕೆ ಸೇರಿಸಿದರು ಅವಕ್ಕೂ ದಶಾವತಾರಕ್ಕೂ ಏನು ಸಂಬಂಧ ಎಂಬುದು ಪ್ರಶ್ನೆಯಾಗುತ್ತದೆ. ಕಲಾವಿದನು ಆ ಅಂಕವನ್ನು ಪ್ರತ್ಯೇಕ ಅಂಕಣವನ್ನಾಗಿ ವಿಂಗಡಿಸುವಾಗ ಹತ್ತರ ಬದಲು ಹನ್ನೆರಡು ಚೌಕಗಳಾಗಿ ರಚಿಸಿ ಹೆಚ್ಚಾದ ಎರಡು ಚೌಕಗಳಲ್ಲಿ ಬಲರಾಮ ಮತ್ತು ಬುದ್ಧನ ಚಿತ್ರಗಳನ್ನು ಚಿತ್ರಿಸಿದ್ದಾರೆ. ಈ ರೀತಿಯ ಚಿತ್ರಗಳು ಸಿದ್ಧಾಪುರದ ಬಳಗಿ, ಅಂಕೋಲಾ, ಸಿರ್ಸಿ, ಹಳದಿಪುರ, ಹೊನ್ನಾವರಗಳಲ್ಲಿನ ಕಾವಿಭಿತ್ತಿಚಿತ್ರಗಳಲ್ಲಿ ಕಂಡು ಬರುತ್ತವೆ. ಎಲ್ಲೂ ಕಾಣುವುದಿಲ್ಲ. ಪಕ್ಕದ ರಂಗನಾಥ ದೇವಾಲಯದಲ್ಲಿ ವಿಷ್ಣುವಿನ ದಶಾವತಾರದ ಚಿತ್ರಗಳನ್ನು ಚಿತ್ರಸಿದ್ದು ಅವುಗಳು ಕ್ರಮವಾಗಿ ಹತ್ತಿವೆ. ಇಲ್ಲಿ ಕೂರ್ಮಾವತಾರ, ಮತ್ಸ್ಯಾವತಾರ, ವರಾಹ ಅವತಾರ, ವಾಮನವತಾರ, ನರಸಿಂಹನ ಅವತಾರ, ಪರಶುರಾಮನ ಅವತಾರ, ಬಲರಾಮ, ಕೋದಂಡರಾಮ, ಕೃಷ್ಣನ ಅವತಾರ, ಬುದ್ಧನ ಅವತಾರ, ಈ ಎಲ್ಲಾ ಅವತಾರಗಳು ಚಾವಣಿಯಲ್ಲಿವೆ. ಸುತ್ತಲಿನ ತೊಲೆಯಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ಹಲವಾರು ದೃಶ್ಯಗಳನ್ನೊಳಗೊಂಡಿವೆ. ಅವುಗಳಲ್ಲಿ ರಾಮನ ವನವಾಸ, ಸೀತಾಪಹರಣ, ಮುದ್ರೆ ಉಂಗುರ ದರ್ಶನ, ಲಂಕಾದಹನ, ಕುಂಭಕರ್ಣಯುದ್ಧ, ರಾಮ ರಾವಣರಯುದ್ಧ, ಶಬರಿ, ಹೀಗೆ ಹಲವಾರು, ದೃಷ್ಯಗಳು ಮೂಡಿ ಬಂದಿವೆ.

ಎರಡನೆ ಅಂಕಣ ಅಂದರೆ ಮಧ್ಯಭಾಗದಲ್ಲಿ ಶೈವ ಧರ್ಮಕ್ಕೆ ಸಂಬಂಧಿಸಿದ ಶಿವನ ೨೫ ಅವತಾರವಿರುವ ಶಿವನ ಪಂಚವಿಂಶತಿ ಚಿತ್ರಗಳನ್ನು ಚಿತ್ರಿಸಲಾಗಿದೆ.ಒಂದೇ ಅಂಕಣದಲ್ಲಿ ಉಪವಿಭಾಗಗಳಾಗಿ ವಿಂಗಡಿಸಿಕೊಂಡು ಲೀಲೆಗಳನ್ನು ಚಿತ್ರಿಸಲಾಗಿದೆ. ಈ ರೀತಿಯ ಚಿತ್ರಗಳು ಬಹಳ ವಿರಳ. ಗುಬ್ಬಿ ಚೆನ್ನಬಸವೇಶ್ವರ ದೇವಾಲಯದಲ್ಲಿ, ಸೀಬಿ, ಹಂಪಿ, ಹಾಗೂ ಲೇಪಾಕ್ಷಿ, ಚಿದಂಬರಂನಲ್ಲಿ ಚಿತ್ರಿಸಲಾಗಿದೆ. ಕೆರೆಗೋಡಿಯಲ್ಲಿ ಚಿತ್ರಗಳು ಜಾನಪದೀಯವಾಗಿದ್ದು ಉಳಿದ ನೆಲೆಗಳಲ್ಲಿ ಸಾಂಪ್ರದಾಯ ಬದ್ಧವಾಗಿಯೇ ರೂಪಿಸಿಲಾಗಿದೆ.

ಮೂರನೇ ಅಂಕಣದಲ್ಲಿ ಸಾಂಪ್ರದಾಯಬದ್ದ ಶಾಸ್ತ್ರ ಬದ್ಧ ಶಿವ, ಬ್ರಹ್ಮ ಇವರುಗಳು ತಮ್ಮ ತಮ್ಮ ಪತ್ನಿಯರೊಡನೆ ವಾಹನರೂಢವಾಗಿರುವ ಚಿತ್ರವು ಕಲಾ ನೈಪುಣ್ಯತೆಗೆ ಕನ್ನಡಿಯಂತಿದೆ. ಚಿತ್ರಗಳಲ್ಲಿ ಬಣ್ಣಗಾರಿಕೆ ಸಂಯೋಜನೆ, ಅರ್ಥವತ್ತಾದ ರೇಖೆಗಳನ್ನು ಈ ಅಂಕಣದಲ್ಲಿ ಚಿತ್ರಿಸಲಾಗಿದೆ. ಈ ಅಂಕಣವು ಬಹುತೇಕ ಶೈವಧರ್ಮಕ್ಕೆ ಸೇರಿದ ಚಿತ್ರಗಳಿದ್ದರೂ ಬ್ರಹ್ಮ- ವಿಷ್ಣು- ಮಹೇಶ್ವರ ಚಿತ್ರವನ್ನು ಸುಂದರವಾಗಿ ಚಿತ್ರಿಸಲಾಗಿದೆ. ಈ ಅಂಕಣವನ್ನು ಮುಖ್ಯವಾಗಿ ಎರಡು ಭಾಗವಾಗಿ ವಿಭಾಗಿಸಿಕೊಂಡು ಚಿತ್ರ ಬರೆಯಲಾಗಿದೆ. ಒಂದು ಅಂಕಣದಲ್ಲಿ ತ್ರಿಪುರ ಸಂಹಾರದ ಚಿತ್ರವಿದ್ದು ತ್ರಿಪುರರ ರುಂಡಗಳು ಚೆಲ್ಲಾಪಿಲ್ಲಿಯಾಗಿದ್ದು ಆಕಾಶ ಭೂಮಿಗೆ ರಕ್ತದೋಕುಳಿ ಎರಚಾಡಿದೆ. ಭೂಮಿ ಮತ್ತು ಆಕಾಶದ ಮಧ್ಯೆ

ನೆಡೆಯುವ ಯುದ್ಧ ಸನ್ನಿವೇಶವೆಂದು ನೋಡುಗನಿಗೆ ಸ್ಪಷ್ಟವಾಗಿ ತಿಳಿಯುತ್ತದೆ. ಎರಡನೇ ಅಂಕಣದಲ್ಲಿ ಬ್ರಹ್ಮ- ವಿಷ್ಣು- ಮಹೇಶ್ವರರು ಪತ್ನಿಯರೊಂದಿಗೆ ವಾಹನರೂಢರಾಗಿರುವ ಚಿತ್ರವನ್ನು ಚಿತ್ರಿಸಲಾಗಿದೆ.

ಅಂಕಣದ ತೊಲೆಗಳಲ್ಲಿ ಸುಂದರವಾದ ಹೂಬಳ್ಳಿ ನಕ್ಷೆಗಳನ್ನು ಚಿತ್ರಿಸಲಾಗಿದೆ. ಕಡುನೀಲಿ ಬಣ್ಣವನ್ನು ಹೇರಳವಾಗಿ ಬಳಸಲಾಗಿದೆ. ಮೊದಲೆರಡು ಅಂಕಣದ ಚಿತ್ರಗಳು ಜಾನಪದೀಯ ರೇಖಾವಿನ್ಯಾಸದಿಂದ ಕೂಡಿದ್ದು ಮೂರನೇ ಅಂಕಣವು ಶಾಸ್ತ್ರಬದ್ಧ ಸಂಯೋಜನೆಯಿಂದ ಕೂಡಿದೆ. ಮೊದಲೆರಡು ಅಂಕಣದ ಚಿತ್ರಗಳು ಮೂರನೇ ಅಂಕಣದ ಚಿತ್ರ ರಚನೆಯಾದ ನಂತರ ಕಾರಣಾಂತರದಿಂದ ಚಿತ್ರ ರಚನೆ ಅರ್ಧಕ್ಕೆ ನಿಂತುಹೋಗಿರಬಹುದು. ಮುಂದುವರೆದ ಚಿತ್ರರಚನೆಯನ್ನು ಅಲ್ಲಿಯ ಸ್ಥಳೀಯ ಕಲಾವಿದರು ಚಿತ್ರಿಸಿರುವುದು ದೃಢಪಡಿಸುತ್ತದೆ. ಇದೇ ರೀತಿಯ ಚಿತ್ರಗಳು ಬೆನಕನ ಕೆರೆಯ ಚೆನ್ನಕೇಶ್ವರ ದೇವಾಲಯದ ಸುತ್ತ ಮುತ್ತಲಿನ ಭಿತ್ತಿ ಚಿತ್ರಗಳ ಪ್ರಭಾವದಿಂದ ಸ್ಥಳೀಯ ಕಲಾವಿದರಿಂದ ಯಂ.ಎಲ್.ಸಿ. ಲಿಂಗಾಚಾರ್ಯ ಎಂಬ ಕಲಾವಿದರಿಂದ ಬರೆಸಲಾಗಿದೆ ಎಂದು ತಿಳಿದು ಬರುತ್ತದೆ. ಇದೇ ಪ್ರಕಾರವಾಗಿ ಈ ಎರಡೂ ಅಂಕಣದ ಚಿತ್ರಗಳನ್ನು ಬರೆದಿದ್ದಾರೆ. ಆದರೆ ಕಲಾವಿದರ ಪರಿಚಯ ಅಥವಾ ಹೆಸರು ಯಾವುದು ಕಂಡು ಬರುವುದಿಲ್ಲ.

### ರಂಗಾಪುರ

ರಂಗಾಪುರವು ಕೆರೆಗೋಡಿಗೆ ಒಂದೂವರೆ ಕಿ.ಮೀ.ದೂರದಲ್ಲಿದೆ. ಇಲ್ಲಿನ ರಂಗನಾಥ ದೇವಾಲಯವು ಒಂದು ಮುಖ್ಯದ್ವಾರ, ಹಜಾರ ಮತ್ತು ಗರ್ಭಗುಡಿಯಿಂದ ಕೂಡಿದೆ. ದೇವಾಲಯದ ಚಂದ್ರಹಾಸದಲ್ಲಿ ಮೂರು ಅಂಕಣಗಳಿದ್ದು ಅವುಗಳಲ್ಲಿ ಮಧ್ಯದ ಅಂಕಣದಲ್ಲಿ ಮಾತ್ರ ಚಿತ್ರಗಳಿವೆ. ಉಳಿದ ಅಕ್ಕ ಪಕ್ಕದ ಅಂಕಣದಲ್ಲಿ ಚಿತ್ರಗಳು ಉಳಿದಿಲ್ಲ. ಹಿಂದೆ ಚಿತ್ರಗಳಿದ್ದವು ಎಂದು ಹೇಳಲಾಗಿದೆ. ಆದರೆ ಯಾವುದೇ ಕುರುಹುಗಳು ಕಂಡುಬರುವುದಿಲ್ಲ. ಉಳಿದ ಅಂಕಣವು ವೈಷ್ಣವ ವಿಷ್ಣುವಿನ ದಶಾವತಾರ ಚಿತ್ರಹೊಂದಿದೆ. ಈ ಅಂಕಣ ಕಲಾವಿದನು ಮಧ್ಯಭಾಗವನ್ನು ಚೆನ್ನಕೇಶ್ವನರನ, ಚಿತ್ರಕ್ಕೆ ಮೀಸಲಿಟ್ಟು ಉಳಿದ ಭಾಗವನ್ನು ಹತ್ತು ವಿಭಾಗವಾಗಿ ವಿಂಗಡಿಸಿದ್ದಾನೆ. ವಿಂಗಡನೆಯಲ್ಲಿ ಸ್ವಲ್ಪ ವ್ಯತ್ಯಾಸವು ಕಾಣುತ್ತದೆ. ಮೇಲೆ ಮತ್ತು ಕೆಳಗೆ ಆರಂತೆ ಚಿಕ್ಕ ಚಿಕ್ಕ ಭಾಗಗಳಾಗಿಸಿ ಪ್ರಮುಖ ಚಿತ್ರವಾದ ಚನ್ನಕೇಶವ ಅಂಕಣದ ಎರಡೂ ಬದಿಯಲ್ಲೂ ಆಯಾಕಾರವಾಗಿ ಅಂಕಣವನ್ನು ವಿಂಗಡಿಸಿ ಚಿತ್ರಿಸಲಾಗಿದೆ.

ರಂಗನಾಥಸ್ವಾಮಿ ದೇವಾಲಯದ ಭಿತ್ತಿ ಚಿತ್ರಗಳು ಸಾಂಪ್ರದಾಯವಾಗಿ ಶಾಸ್ತ್ರಬದ್ಧವಾದ ರೇಖೆಗಳಿಂದ ಚಿತ್ರಸಿದ್ದು, ರೇಖೆಗಳು, ಬಣ್ಣ, ಸಂಯೋಜನೆ ಪ್ರಬುದ್ಧತೆಯಿಂದ ಕೂಡಿದವುಗಳಾಗಿವೆ. ಹೂಬಳ್ಳಿ ನಕ್ಷೆಯ ಚಿತ್ರಗಳು ಒಟ್ಟಾರೆ ಚಿತ್ರಗಳಿಗೆ ಮೆರುಗನ್ನು ತಂದು ಕೊಟ್ಟಿವೆ. ಅಂಕಣದ ಸುತ್ತಲಿನ ತೊಲೆಗಳನ್ನು ನಾಲ್ಕು ಭಾಗಗಳಾಗಿ ಮಾಡಿಕೊಂಡು ಗರ್ಭಗುಡಿ ಬಾಗಿಲು ಮೇಲೆ ಶ್ರೀರಾಮನ ಪಟ್ಟಾಭಿಷೇಕದ ಚಿತ್ರವನ್ನು ಚಿತ್ರಿಸಲಾಗಿದೆ. ರಾಮನ ಬಲಬದಿಯಲ್ಲಿ ಲಕ್ಷ್ಮಣ, ಅಂಜನೇಯ, ಸೇರಿದಂತೆ ಋಷಿಮುನಿಗಳು ದೇವಾಧಿ ದೇವತೆಗಳು ಪಟ್ಟಾಭಿಷೇಕಕ್ಕೆ ಆಗಮಿಸಿದ್ದಾರೆ. ರಾಮನ ಎಡಬದಿಯಲ್ಲಿ

ಸೀತೆಯೊಂದಿಗೆ ದೇವತೆಗಳು ಸಾಲಾಗಿ ನಿಂತಿದ್ದಾರೆ. ವಿಶೇಷ ಸಿಂಹಾಸನದೊಂದಿಗೆ ರಾಮನ ಪಟ್ಟಾಭಿಷೇಕದ ಚಿತ್ರವು ಮೂಡಿದೆ.

ಗರ್ಭಗುಡಿಯ ಬಲಭಾಗದ ತೊಲೆಯಲ್ಲಿ ಗಿರಿಜಾಕಲ್ಯಾಣ ಚಿತ್ರವಿದೆ. ಪರ್ವತರಾಜನು ತನ್ನ ಮಗಳಾದ ಗಿರಿಜೆಯನ್ನು ಶಿವನಿಗೆ ಧಾರೆ ಎರೆಯುವ ಚಿತ್ರವು ಮಧ್ಯದಲ್ಲಿದೆ. ಅಶ್ವತ್ಥವೃಕ್ಷ ಶಚಿದೇವಿ, ಸರಸ್ವತಿ, ಲಕ್ಷ್ಮೀ ಮುಂತಾದ ದೇವತೆಯರು ಎಡಬದಿಯಲ್ಲಿದ್ದಾರೆ. ವಿಷ್ಣು, ಬ್ರಹ್ಮ, ವೀರಭದ್ರ, ಭೈರವ, ಇಂದ್ರ, ಮುಂತಾದ ದೇವಾನು ದೇವತೆಯರು ಕಲ್ಯಾಣ ಮಹೋತ್ಸವದಲ್ಲಿ ಭಾಗವಹಿಸಿರುವ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಗರ್ಭಗುಡಿಯ ಎಡ ಅಡ್ಡ ತೊಲೆಯಲ್ಲಿ ಸೀತಾ ಕಲ್ಯಾಣ ಚಿತ್ರವಿದ್ದು ಜನಕ ಮಹಾರಾಜನು ಸೀತೆಯನ್ನು ರಾಮನಿಗೆ ಧಾರೆ ಎರೆಯುತ್ತಿದ್ದಾನೆ. ಅಕ್ಕ ಪಕ್ಕದಲ್ಲಿ ಅರಮನೆಯ ಪ್ರಮುಖರು, ಸೇನಾಧಿಕಾರಿಗಳು ಪೋಷಕರೊಂದಿಗೆ ದೇವತೆಗಳು ಹಾಜರಿದ್ದಾರೆ. ಅಲ್ಲಿ ನೀಲಿ, ತಿಳಿಕೆಂಪು, ಹಸಿರು ಬಣ್ಣವನ್ನು ಬಳಸಲಾಗಿದೆ. ಕಮಲದ ತೋರಣದಿಂದ ಮದುವೆ ಮಂಟಪವನ್ನು ಸಿಂಗರಿಸಲಾಗಿದೆ.

ಗರ್ಭಗುಡಿಯ ಎದುರು ತೊಲೆಯಮೇಲೆ ದರ್ಬಾರಿನಲ್ಲಿ ವಿರಾಜಮಾನವಾಗಿರುವ ಗಿರಿಜಾ ಮೀಸೆಯ ಮುಮ್ಮಡಿ ಕೃಷ್ಣರಾಜ ಒಡೆಯರ ಚಿತ್ರವಿದೆ. ಇಕ್ಕೆಲಗಳಲ್ಲಿ ಅರಮನೆಯ ಮಂತ್ರಿವರ್ಯರು, ಆಳುಕಾಳುಗಳು ಜನಸಾಮಾನ್ಯರು ಬಂದೂಕು ಹಿಡಿದ ಸಿಪಾಯಿಗಳು ತಮ್ಮ ತಮ್ಮ ಪೋಷಕರೊಂದಿಗೆ ಸಭೆಯಲ್ಲಿ ಹಾಜರಿರುವ ದೃಶ್ಯವನ್ನು ಚಿತ್ರಿಸಲಾಗಿದೆ. ಉಳಿದಂತೆ ತೊಲೆಯ ಕೆಳಭಾಗದಲ್ಲಿ ವಿಶಾಲವಾದ ಹಸಿರಿನಿಂದ ಕೂಡಿದ ಹೂಬಳ್ಳಿ ನಕ್ಷೆಗಳಿಂದ ಅಲಂಕರಿಸಲಾಗಿದೆ, ಅಲ್ಲದೆ ಇಲ್ಲಿನ ಅಲಂಕಾರಿಕ ಮಾದರಿಯು ಬಹುತೇಕ ಸುರಪುರದ ಶೈಲಿಯನ್ನು ಹೋಲುವುದರಿಂದ ಇಲ್ಲಿಯ ಕಲಾವಿದರ ಗುಂಪಿನಲ್ಲಿ ಸುರಪುರಶೈಲಿಯ ಅಲಂಕಾರ ಪರಿಣಿತರು ಸೇರಿ ಚಿತ್ರಿಸಿದ್ದಾರೆ ಎನ್ನುವುದು ತಿಳಿಯುತ್ತದೆ. ಅಲ್ಲದೆ ಮುಮ್ಮಡಿಯವರ ದರ್ಬಾರು ದೃಶ್ಯದ ಎರಡೂ ಬದಿಯಲ್ಲಿ ಪ್ರತ್ಯೇಕ ಸಣ್ಣ ಎರಡು ಅಂಕಣಗಳಿವೆ. ಅವುಗಳಲ್ಲಿ ಒಂದು ಅಂಕಣ ತುಂಬಾ ಹುಲಿಯ ಚಿತ್ರವು ಮತ್ತೊಂದು ಬದಿಯ ಅಂಕಣದಲ್ಲಿ ಟಿಪ್ಪುವು ಹುಲಿಯೊಂದಿಗೆ ಸೆಣಸುತ್ತಿರುವ ದೃಶ್ಯವಿದೆ.

ಕೆರೆಗೋಡಿ ಮತ್ತು ರಂಗಾಪುರದ ಚಿತ್ರಗಳು ಎರಡು ಪ್ರತ್ಯೇಕ ಶೈಲಿಯ ಕಲೆಯಿಂದ ಕೂಡಿದ ಭಿತ್ತಿ ಚಿತ್ರದ ನೆಲೆಗಳಾಗಿವೆ. ಅವು ಒಂದಾದ ಮೇಲೆ ಒಂದರಂತೆ ಚಿತ್ರಿಸಿರುವ ಸಾಧ್ಯತೆ ಇದೆ.ಮತ್ತೊಂದು ವಿಶೇಷವೆಂದರೆ, ಕೆರೆಗೋಡಿಯ ತ್ರಿಪುರ ಸಂಹಾರ ಚಿತ್ರದ ಅಂಕಣದಲ್ಲಿ ಚಿತ್ರಕಾರನ ಹೆಸರು, ಚಿತ್ರ ಬರೆಸಿದ ವಿವರಗಳಿವೆ. ಆ ಚಿತ್ರ ಬರೆಯಲು ಕಲಾವಿದರಿಗೆ ನೀಡಿದ ಸಂಭಾವಣೆಯನ್ನು ೬೦ರೂ ಮಜೂರಿ ಎಂಬ ವಿವರಗಳನ್ನು ಬರೆಯಲಾಗಿದೆ. ಅಲ್ಲದೆ ಕಲಾವಿದ ನೊಣವಿನಕೆರೆ ಚಿತ್ರಗಾರ್ ಸುಬ್ಬಣ್ಣ ಮಾಡಿದ ಚಿತ್ರ ಕೆಲಸಕ್ಕೆ ಮಜೂರಿ ೬೦ ರೂಪಾಯಿ. ಅದನ್ನು ಅಣಗವಳಿ ಶಂಕರೇಗೌಡರು ಮಾಡಿಸಿದ ಭಕ್ತಿ ಸೇವೆ ಎಂದು ಬರೆಯಲಾಗಿದೆ. ಚಿತ್ರ ಬರೆಸಿದ್ದಕ್ಕೆ ಹಲವಾರು ಮಾಹಿತಿಗಳು ದೊರಕುತ್ತವೆ. ಇವುಗಳು ಯಾವುದೇ ಪುಸ್ತಕದಲ್ಲಿ ಮುದ್ರಣಗೊಂಡಿಲ್ಲ.

ಇಲ್ಲಿನ ಬಣ್ಣಗಾರಿಕೆಯು, ಕಡುಕೆಂಪು, ಕಡುನೀಲಿ, ಹಸಿರು, ಶ್ವೇತ, ಹಳದಿಯಿಂದ ಕೂಡಿದೆ. ಜಿಲ್ಲೆಯಲ್ಲಿ ಹೇರಳವಾಗಿ ಕೆಂಪನ್ನು ಬಳಸಲಾಗಿದೆ. ಮತ್ತು ಬಾಹ್ಯ ರೇಖೆಗಳಿಗೆ ಕಪ್ಪು ಬಣ್ಣವನ್ನು ಉಪಯೋಗಿಸಲಾಗಿದೆ. ನಕ್ಷೆಗಳಿಗೆ ಕಡು ನೀಲಿಯನ್ನು ಹೆಚ್ಚಾಗಿ ಬಳಸಲಾಗಿದೆ. ಇಲ್ಲಿನ ಚಿತ್ರಗಳು ಸೀಬಿ, ತುಮಕೂರು, ಶಿರಾ, ಹಿರಿಯೂರು ಚಿತ್ರಗಳ ಚಿತ್ರರಚನೆಯ ವಿಧಾನವನ್ನು ಹೋಲುತ್ತವೆ. ಹೆಚ್ಚಿನ ವಿವರಗಳನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ

**ಸೀಬಿ**

ಸೀಬಿಯು ತುಮಕೂರಿನಿಂದ ಇಪ್ಪತ್ತೈದು ಕಿ.ಮೀ.ದೂರದಲ್ಲಿ ರಾಷ್ಟ್ರೀಯ ಹೆದ್ದಾರಿ ನಾಲ್ಕಕ್ಕೆ ಹೊಂದಿಕೊಂಡಿದೆ. ತುಮಕೂರಿನಿಂದ ಉತ್ತರಕ್ಕೆ ಇರುವ ಈ ದೇವಾಲಯವು ಲಕ್ಷ್ಮೀ ನರಸಿಂಹ ದೇವಾಲಯವಾಗಿದ್ದು ಪುರಾತನವಾದ ದೇವಾಲಯವಾಗಿದೆ. ಸೀಬಿಯು ಪೂರ್ವದ ಹೆಸರು ಸೀಬೂರು ಆಗಿತ್ತು. ವಿಜಯನಗರ ಬುಕ್ಕನ ಮಗನಾದ ಹರಿಹರರಾಯನು ಕ್ರಿ.ಶ. ೧೪೦೩ರಲ್ಲಿ ಅದನ್ನು ಅಗ್ರಹಾರವಾಗಿ ಪರಿವರ್ತಿಸಿದನು. ಅಲ್ಲದೆ ಸುಮಾರು ಕೊಡುಗೆಗಳನ್ನು ನೀಡಿದನು. ಇವನ ಮನಸಂತೋಷ ಗೊಳಿಸುವುದಕ್ಕೆ “ಹರಿಹರರಾಮಪುರ” ಎಂದು ಬದಲಾಯಿತು. ವಿಜಯನಗರ ಅವನತಿಯ ನಂತರ ಹಿಂದಿನ ಹೆಸರೇ ಮುಂದುವರಿಯಿತು. ಮುಂದೆ ಸೀಬಿಯಾಗಿರುವುದಕ್ಕೆ ದಾಖಲೆಗಳಿಲ್ಲ. ಈ ದೇವಾಲಯವು ವಿಜಯನಗರ ಕಾಲದ ದೇವಾಲಯವಾಗಿದ್ದು ಹಲವಾರು ಹಂತದಲ್ಲಿ ಜೀರ್ಣೋದ್ಧಾರವಾಗಿದೆ. ಇಲ್ಲಿನ ಚಿತ್ರಗಳನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಆಡಳಿತದಲ್ಲಿ ಪೌಜುದಾರನಾಗಿ ಕೀರ್ತಿವಂತನಾಗಿದ್ದ ಕರೀಕರನಲ್ಲಪ್ಪ ಎಂಬುವನು ಮೈಸೂರಿನ ಕಲಾವಿದರನ್ನು ಕರೆತಂದು ಚಿತ್ರಗಳನ್ನು ಬರೆಸಿದ್ದಾನೆಂದು ಕೆಲವು ಆಧಾರಗಳ ಮೇಲೆ ನಿರ್ಧರಿಸಲಾಗಿದೆ.

ಈ ದೇವಾಲಯವು ರಾಜಗೋಪುರವನ್ನು ಒಳಗೊಂಡು ಹಜಾರ ಮತ್ತು ಗರ್ಭಗುಡಿಯನ್ನು ಹೊಂದಿದೆ. ದೇವಾಲಯದ ಹಜಾರ ಮತ್ತು ರಾಜಗೋಪುರದ ಛಾವಣಿಯಲ್ಲಿ ಹಾಗೂ ತೊಲೆಗಳಲ್ಲಿ ಭಿತ್ತಿ ಚಿತ್ರದ ನಿಯಮಾನುಸಾರವಾದ ಭಿತ್ತಿಯ ವಿಧಿವಿಧಾನದಿಂದ ಕೂಡಿದ ಚಿತ್ರರಚಿಸಲಾಗಿದೆ. ರಾಮಾಯಣ ಮಹಾಭಾರತ, ಭಾಗವತ ಪುರಾಣವನ್ನಾಧರಿಸಿದ ಚಿತ್ರಗಳಿಂದ ತುಂಬಿಹೋಗಿದೆ. ಈ ದೇವಾಲಯ ವೈಷ್ಣವ ಧರ್ಮದ್ದಾಗಿದ್ದರೂ ಶೈವ ಧರ್ಮಕ್ಕೆ ಸಂಬಂಧಿಸಿದ ಹಲವಾರು ಚಿತ್ರಗಳನ್ನು ಚಿತ್ರಿಸಲಾಗಿದೆ, ಶಿವನಪಂಚವಿಂಶತಿ ಶಿವನ ೨೫ ರೀತಿಗಳ ಚಿತ್ರಗಳು ಇಲ್ಲಿ ರಚನೆಗೊಂಡಿವೆ. ಇಲ್ಲಿ ಕಲಾವಿದನು ಇಡೀ ಪಡಸಾಲೆಯನ್ನು ಒಂಬತ್ತು ಮುಖ್ಯ ಅಂಕಣವನ್ನಾಗಿ ಮಾಡಿಕೊಂಡಿದ್ದಾನೆ. ಒಂದೊಂದು ಅಂಕಣವನ್ನು ಒಂದೊಂದು ಕಥೆಗೆ ಮೀಸಲಿಟ್ಟು ಅದರಲ್ಲಿ ಚಿಕ್ಕ ಚಿಕ್ಕ ಚೌಕಗಳನ್ನಾಗಿಸಿಕೊಂಡು ಅವತಾರಗಳ ವಿವರಣೆ ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ಅಂಕಣಗಳನ್ನು ಬೇರ್ಪಡಿಸುವ ತೊಲೆಗಳೂ ಕೂಡ ಚಿತ್ರಾವೃತಗೊಂಡಿವೆ.

ಪೂರ್ವದ ಅಂಕಣದಿಂದ ಪ್ರಾರಂಭಿಸಿದರೆ ಅಲ್ಲಿನ ಛಾವಣಿಯಲ್ಲಿರುವ ಚಿತ್ರಗಳನ್ನು ಎರಡು ಸಾಲುಗಳನ್ನಾಗಿ ವಿಂಗಡಿಸಬಹುದು. ಇವುಗಳಲ್ಲಿ ಒಂದೊಂದು ಗುಂಪಿನಲ್ಲಿಯೂ ಇವುಗಳಲ್ಲಿ ಒಂದರೊಳಗೊಂದರಂತೆ ಎರಡು ಚಚೌಕಾಕೃತಿಗಳು ಕಂಡುಬರುತ್ತವೆ. ಅವುಗಳಲ್ಲಿ ಒಳಗಿನ ಚೌಕವನ್ನು ನಿರ್ಮಿಸಿರುವ ಚಿತ್ರಗಳಲ್ಲಿಯೂ ಎರಡು ಸಾಲುಗಳಿವೆ. ಇವುಗಳಲ್ಲಿ ಕೆಳಗಿನ ಸಾಲು ಮಹೇಶ್ವರ ಮೂರ್ತಿಯನ್ನು ಮತ್ತು ಅದಕ್ಕೆ ಸಂಬಂಧಪಟ್ಟ ಚಿತ್ರಗಳನ್ನು ಒಳಗೊಂಡಿದೆ. ಇದರ ಒಂದು ಕಡೆ ಗಣಪತಿ ಇನ್ನೊಂದು ಕಡೆಯಲ್ಲಿ ಋಷಿಗಳ ಚಿತ್ರಗಳಿವೆ. ಇಲ್ಲಿರುವ ಶಿವನ ತೊಡೆಯ ಮೇಲೆ ಗೌರಿಯೂ ಇನ್ನೊಂದರ ಮೇಲೆ ಗಂಗೆಯೂ ಕುಳಿತಿದ್ದಾರೆ. ಇದರ ಮೇಲಿರುವ ಸಾಲಿನ ಮಧ್ಯಭಾಗದಲ್ಲಿ ಚಂದ್ರ ಶೇಖರ ಮೂರ್ತಿಯಿದೆ. ಅದರ ಒಂದು ಕಡೆಯಲ್ಲಿ ಷಣ್ಮುಖ ಇನ್ನೊಂದು ಕಡೆ ಪಾರ್ವತಿ ಈ ಸಾಲಿನ ಎಡಭಾಗದ ಕೊನೆಯಲ್ಲಿ ಮತ್ತು ಬಲಭಾಗದ ಕೊನೆಯಲ್ಲಿ ನಾರದರು ತಮ್ಮ ವಾಧನ ಸಮೇತರಾಗಿ ನಿಂತಿದ್ದಾರೆ. ಇವುಗಳಲ್ಲಿಯೂ ದಕ್ಷಿಣ ಮೂರ್ತಿ ಮತ್ತು ತ್ರಿವಿಕ್ರಮರ ಚಿತ್ರಗಳಿವೆ. ಇದರ ಹೊರಚೌಕದಲ್ಲಿರುವ ಚಿತ್ರಗಳು ಅತಿ ಚಿಕ್ಕ ಆಕೃತಿಯವುಗಳಾಗಿವೆ. ಅವು ಶಿವಲೀಲೆಯನ್ನೇ ಮುಖ್ಯ ವಸ್ತುವನ್ನಾಗಿ ಉಳ್ಳವಾಗಿವೆ. ಶರಭಾವತಾರ, ಮಹಾದೇವ, ಸುಂದರ, ಕಲ್ಯಾಣಮಂಟಪ ಉಮಾಮಹೇಶ್ವರ, ಅಂದಕಾಸುರ ಮರ್ಧನ, ಗಜಸಂಹಾರ, ಭೈರವ, ವೀರಭದ್ರ ಶರವತಾ ಮುಂತಾದ ಶಿವನ ಅವತಾರಗಳು ಚಿತ್ರಿತವಾಗಿದೆ. ಇವು ಶಿವಪಂಚ ಚಿತ್ರಗಳಾಗಿವೆ.

ಇದರ ಪಕ್ಕದಲ್ಲಿ ಅಂದರೆ ಪೂರ್ವ ಮತ್ತು ದಕ್ಷಿಣದ ಮಧ್ಯದಲ್ಲಿರುವ ಇನ್ನೊಂದು ಅಂಕಣದ ಛಾವಣಿಯಲ್ಲಿ ಚಿತ್ರ ಪಟ್ಟಿಕೆಯಂತಿರುವ ಅನೇಕ ಚಿತ್ರಗಳ ಸಾಲುಗಳು ಕಂಡುಬರುತ್ತವೆ. ಅಲ್ಲಿ ಬಹುತೇಕ ಚಿತ್ರಗಳು ಗುರುತು ಕಳೆದುಕೊಂಡಿವೆ. ಯಾವ ಚಿತ್ರವೆಂದು ಗುರುತಿಸಲು ಸಾಧ್ಯವಾಗುವುದಿಲ್ಲ. ಮಹಾಭಾರತದ ಯುದ್ಧದ ದೃಶ್ಯಗಳಲ್ಲಿ ಚತುರಂಗ, ಸೈನ್ಯದ ವಿವಿಧ ದೃಶ್ಯವು ಎರಡನೇ ಸಾಲಿನಲ್ಲಿದೆ. ನಂತರ ಕೃಷ್ಣನ ಲೀಲೆಗೆ ಸಂಬಂಧಿಸಿದ ಚಿತ್ರಗಳನ್ನು ನಿರೂಪಿಸಲಾಗಿದೆ. ಗೋಪಿಕೆಯರ ಮಧ್ಯದಲ್ಲಿರುವ ಕೃಷ್ಣ, ಬೃಂದಾವನ ಮತ್ತು ಗರುಡ ಮೊದಲಾದ ಚಿತ್ರಗಳು ಕಾಣುತ್ತವೆ. ವಿಷ್ಣುವಿನ ಲೀಲೆಗಳಾದ ಶಂಬರಾಸುರವದೆ, ಭಸ್ಮಾಸುರ ಸಂಹಾರ, ಕಿನರಕಾಸುರ ಮರ್ಧನ, ಕಾಳಿಂಗಮರ್ಧನ, ರುಕ್ಮಿಣಿ ಕಲ್ಯಾಣ ಗೋಪಿಕೆಯರ ವಸ್ತ್ರಾಪರಹಣ, ಗೋವರ್ಧನಗಿರಿಧಾರ, ಜೊತೆಗೆ ಕೆಲವು ರಾಸ ಕ್ರೀಡೆಗೆ ಸಂಬಂಧಿಸಿದ ಚಿತ್ರಗಳು ಸೇರಿದಂತೆ ವಿಷ್ಣುವಿನ ಹಲವಾರು ದೃಶ್ಯಾವಳಿಗಳು ಈ ಅಂಕಣಗಳಲ್ಲಿ ಕಾಣಬಹುದು.

ಪಶ್ಚಿಮದ ಅಂಕಣದಲ್ಲಿ ಪ್ರಧಾನವಾಗಿ ಗಮನವನ್ನು ಸೆಳೆಯುವ ಚಿತ್ರವೆಂದರೆ ಲಕ್ಷ್ಮೀನರಸಿಂಹನದು ಆತನ ಅಕ್ಕಪಕ್ಕಗಳಲ್ಲಿ ಬ್ರಹ್ಮ ಈಶ್ವರರಿದ್ದಾರೆ. ಇವರ ಸುತ್ತ ನರಸಿಂಹಾವತಾರದ ಕಥೆಯನ್ನು ಹೇಳುವ ಚಿತ್ರಗಳು ಚಿತ್ರಿತವಾಗಿವೆ. ಇದರ ಮುಂದಿನ ಅಂಕಣವನ್ನು ರಾಮಾಯಣಕ್ಕೆ ಮೀಸಲಾಗಿರಿಸಲಾಗಿದೆ. ರಾಮ ಮತ್ತು ಸಹೋದರರ ಕಲ್ಯಾಣ, ಸುಗ್ರೀವಸಖ್ಯ, ಸಪ್ತಭೇದನೆ, ವಾಲಿಯ ಮರಣ, ಅಂಜನೇಯನ

ಸಮುದ್ರಲಂಘನ, ಲಂಕೆಯಲ್ಲಿ ಹನುಮಂತ ಸೀತೆಯನ್ನು ಹುಡುಕುತ್ತಿರುವುದು, ಅಶೋಕವನದಲ್ಲಿ ಸೀತೆ ಇತ್ಯಾದಿ ಚಿತ್ರಗಳು ಆಕರ್ಷಕವಾಗಿವೆ. ಮುಂದಿನ ಅಂಕಣದಲ್ಲಿ ರಾಮಾಯಣದ ದೃಶ್ಯವು ಮುಂದುವರೆದಂತೆ ಇಂದ್ರಜಿತ, ಕುಂಭಕರ್ಣ, ರಾವಣ ಮೊದಲಾದವರು ಇಲ್ಲಿ ಕಾಣಿಸಿಕೊಳ್ಳುತ್ತಾರೆ. ಸಂಜೀವಿನಿ ತರುತ್ತಿರುವ ಆಂಜನೇಯ ಮುಂತಾದ ಚಿತ್ರಗಳನ್ನು ಚಿತ್ರಿಸಲಾಗಿದೆ. ಮುಂದಿನ ಅಂಕಣದಲ್ಲಿ ರಾಮರಾವಣರ ಯುದ್ಧದ ಚಿತ್ರವು ನೋಡುಗರ ಗಮನ ಸೆಳೆಯುತ್ತದೆ. ಕಲಾವಿದನು ಸನ್ನಿವೇಶಕ್ಕೆ ತಕ್ಕಂತೆ ಚಿತ್ರದ ಗಾಂಭೀರ್ಯವನ್ನು ಕಾಪಾಡಿಕೊಂಡು ಬಂದಿದ್ದಾನೆ.

ಮುಖಮಂಟಪ ಚಾವಣಿಯನ್ನು ಒಂಬತ್ತು ಪ್ರತ್ಯೇಕ ಅಂಕಣವನ್ನಾಗಿಸಿಕೊಂಡು ಮೂರು ಅಂಕಣವನ್ನು ಕೃಷ್ಣನ ಬಾಲಲೀಲೆಯಿಂದ ಪ್ರಾರಂಭಿಸಿ ವಿಶ್ವರೂಪದವರೆಗೆ ಬಹುತೇಕ ಸನ್ನಿವೇಷಗಳನ್ನು ಚಿತ್ರಿಸಲಾಗಿದೆ. ಮಧ್ಯದ ವಿಶಾಲವಾದ ಅಂಕಣವನ್ನು ವಿಷ್ಣುವಿನ ವಿಶ್ವರೂಪಕ್ಕೆ ಮೀಸಲಿಟ್ಟು ಚರಾಚರ ಪ್ರಾಣಿಯಿಂದ ಮಾನವನ ತನಕ ಪ್ರಕೃತಿ ಸೌಂದರ್ಯದೊಂದಿಗೆ ವಿಶ್ವರೂಪ ದರ್ಶನ ಚಿತ್ರದಲ್ಲಿದೆ. ಒಟ್ಟಾರೆ ಭಿತ್ತಿಚಿತ್ರದ ಪ್ರಧಾನ ಚಿತ್ರವಾಗಿ ಅದು ಕಂಡು ಬರುತ್ತದೆ. ಮತ್ತೊಂದು ಬದಿಯಲ್ಲಿ ರಾಮಾಯಣದ ರಾಮನ ಬಾಲ್ಯದಿಂದ ಪಟ್ಟಾಭಿಷೇಕದವರೆಗೆ ಬರುವ ಬಹುತೇಕ ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ಅದರಲ್ಲಿ ರಾಮ ರಾವಣರ ಯುದ್ಧದ ದೃಶ್ಯವನ್ನು ಒಂದು ಅಂಕಣದಲ್ಲಿ ಪ್ರತ್ಯೇಕಿಸಲಾಗಿದೆ. ಹೀಗೆ ಇಡೀ ಮುಖಮಂಟಪವು ಚಿತ್ರಗಳಿಂದ ತುಂಬಿ ಕೊಂಡಿದೆ. ಕಲಾವಿದ ಸ್ವಲ್ಪವೂ ಜಾಗವನ್ನು ವ್ಯಯ ಮಾಡದೆ ಒಂದರ ಪಕ್ಕದಲ್ಲಿ ಮತ್ತೊಂದರಂತೆ ಆದಷ್ಟು ಎಲ್ಲ ಬಗೆಯ ಸನ್ನಿವೇಶಗಳು ಸನ್ನಿವೇಷಕ್ಕೆ ತಕ್ಕಂತೆ ಜನರ ಸಂಯೋಜನೆಯನ್ನು ಬಲವಂತವಾಗಿಯಾದರೂ ತುರುಕುವ ಪ್ರಯತ್ನ ಮಾಡಿದ್ದಾನೆ.

ಮುಖ ಮಂಟಪದ ಕೇಂದ್ರಬಿಂದುವಾದ ಮಧ್ಯದ ಅಂಕಣವು ವಿಷ್ಣುವಿನ ವಿಶ್ವರೂಪ ಚಿತ್ರ ಹೊಂದಿದೆ. ನಾಲ್ಕು ಮುಖಗಳಿಂದ ಕೂಡಿರುವುದು ಇದರ ವೈಶಿಷ್ಟ್ಯ. ಎರಡು ಕೈಗಳಲ್ಲಿ ಶಂಕ ಚಕ್ರ, ಮತ್ತೆರಡು ಕೈಗಳು ಭಕ್ತರಿಗೆ ಅಭಯವನ್ನು ನೀಡುವಂತೆ ಚಿತ್ರಸಲಾಗಿದೆ. ವಿಷ್ಣುವಿನ ದೇಹ ರಚನೆಯು ಪೃಥ್ವಿಯ ಚರಾಚರ ಪ್ರಾಣಿಪಕ್ಷಿ ಮನುಸಂಕುಲ, ಗಿಡ ಮರಗಳು, ಸುಂದರ ಪ್ರಕೃತಿಯೊಂದಿಗೆ ವಿಷ್ಣುವು ಕಂಗೊಳಿಸುತ್ತಿರುವ ಚಿತ್ರವು ಕಲಾವಿದ ಸೃಜನಾತ್ಮಕ ಶಕ್ತಿಗೆ ಹಿಡಿದ ಕನ್ನಡಿಯಾಗಿದೆ. ಕಲಾವಿದನ ಕಲ್ಪನೆಗೆ ಮಿತಿಯೇ ಇಲ್ಲ ಎಂಬುದು ಕಲ್ಪನಾಲೋಕದಲ್ಲಿ ವಿಹರಿಸಿ ಬಂದಂತೆ ಭಾಸವಾಗುತ್ತದೆ. ಈ ಚಿತ್ರವು ಕಲಾವಿದನ ಶಕ್ತಿಸಾಮರ್ಥ್ಯವನ್ನು ಪ್ರದರ್ಶಿಸುವ ಕಲಾಕೃತಿಯಾಗಿದೆ. ವಿಷ್ಣುವಿನ ವಕ್ಷಸ್ಥಲದ ಭಾಗದಲ್ಲಿ ವೃತ್ತಾಕಾರವಾದ ರಚನೆಗಳಿದ್ದು ಅದರ ಮೇಲೆ ಒಂದು ವೃಶ್ಚಿಕ ಚಿತ್ರಿತವಾಗಿರುವುದು ಕಂಡುಬರುತ್ತದೆ. ಇದು ಜಗತ್ತಿನ ಸಾಂಕೇತಿಕ ರೂಪ ಎಂದು ಊಹಿಸಿದ್ದಾರೆ. ಈ ಮೂರ್ತಿಯ ಕಾಲುಗಳಿಂದ ಹಿಡಿದು ತಲೆಯವರೆಗೂ ಮೇಲೇರಿದಂತೆಲ್ಲಾ ಹಾವುಗಳು, ಜಲಚರಪ್ರಾಣಿಗಳು, ರಾಕ್ಷಸರು, ದೇವಮಾನವರು,

ಋಷಿಗಳು, ದೇವತೆಗಳು ಚಿತ್ರಿತರಾಗಿದ್ದಾರೆ. ಒಟ್ಟಾರೆ ಇಡೀ ಮೂರ್ತಿಯ ರಚನೆಯೇ ವಿಶ್ವದ ವಿಕಾಸವನ್ನು ಸೂಚಿಸುವ ಒಂದು ದೊಡ್ಡ ಸಂಕೇತ ಎಂದು ಹೇಳಲು ಅವಕಾಶವಿದೆ. ಈ ಮೂರ್ತಿಯ ಎರಡೂ ಕಡೆಗಳಲ್ಲಿಯೂ ದೇವತೆಗಳಿದ್ದಾರೆ. ಬಲಬದಿಯಲ್ಲಿ ನಾರದನೂ, ಎಡಬದಿಯಲ್ಲಿ ತುಂಬುರನು ನಿಂತಿದ್ದಾರೆ. ಇದರ ಸುತ್ತಲೂ ವಿಷ್ಣುವಿನ ಇತರ ಅವತಾರಗಳ ಕಥೆಗಳೂ ಲೀಲೆಗಳಾಗಿ ನಿರೂಪಿಸಲಾಗಿದೆ.

ರಾಜಗೋಪುರದ ಭಾವಣೆಯಲ್ಲೂ ಚಿತ್ರಗಳು. ಆವೃತಗೊಂಡಿವೆ, ಈ ಭಾಗವನ್ನು ಮೂರು ಮುಖ್ಯ ಅಂಕಣಗಳನ್ನಾಗಿಸಿಕೊಂಡು ಮಧ್ಯದ ಅಂಕಣದಲ್ಲಿ ಸಾಮಾಜಿಕ ಜೀವನಕ್ಕೆ ಸಂಬಂಧಿಸಿದ ಚಿತ್ರಗಳು, ಚಿತ್ರಿಸಿದೆ. ಆ ಚಿತ್ರ ಜನಸಾಮಾನ್ಯರ ನಿತ್ಯಬದುಕು ಅಂದಿನ ಜನಜೀವನ ಶೈಲಿಯನ್ನು ನೆನಪಿಸುತ್ತದೆ. ಇಲ್ಲಿ ಎಲ್ಲ ಬಗೆಯ ಜನರ ಕಸುಬುಗಳನ್ನು ಪ್ರತಿನಿಧಿಸುವ ಚಿತ್ರಗಳನ್ನು ಚಿತ್ರಿಸಲಾಗಿದೆ. ಈಡಿಗರು ಹೆಂಡವನ್ನು ಇಳಿಸುವ ದೃಶ್ಯವು ಮುಖ್ಯವಾಗಿ ಚಿತ್ರಿಸಲಾಗಿದೆ. ಕುರುಬರು ಕುರಿ ಕಾಯುತ್ತ, ಸ್ತ್ರೀಯರು ಬಾವಿಯ ಬಳಿ ಹರಟೆ ಹೊಡೆಯುವ, ಬೇಟೆಗಾರರು ಕಾಡು ಹಂದಿಯನ್ನು ಅಟ್ಟಿಸಿಕೊಂಡು ಹೋಗುವ, ಅರಮನೆಯ ಸೈನಿಕರು, ತಾಯಿ ಮಗುವನ್ನು ಸಂತೈಸುತ್ತಿರುವುದು, ಚಿತ್ರಿಸಲಾಗಿದೆ. ರೈತ, ಹಲವಾರು ಪ್ರಾಣಿ ಮಂಗ, ಹುಲಿ, ಸಿಂಹ ಸಕಲ ಪ್ರಾಣಿ ಪಕ್ಷಿ ಸಂಕುಲವನ್ನು ಪರಿಚಯಿಸುವ ಪ್ರಯತ್ನವನ್ನು ಮಾಡಿದ್ದಾರೆ. ಇದೊಂದು ವಿಶೇಷ ಅಂಕಣವೆಂದರೆ ತಪ್ಪಾಗುವುದಿಲ್ಲ.

ಮಧ್ಯದ ಅಂಕಣವು ನಿಸರ್ಗ ರಮಣೀಯವಾದ ನೈಜಬದುಕಿನ ಚಿತ್ರಗಳ ಅಂಕಣವಾಗಿದೆ. ಅದರ ಅಕ್ಕಪಕ್ಕದ ಅಂಕಣಗಳು ರತಿಲಾಸ್ಯಕ್ಕೆ ಸಂಬಂಧಿಸಿದ ಸುಮಾರು ೫೦ಕ್ಕೂ ಹೆಚ್ಚು ಚಿಕ್ಕ ಚಿಕ್ಕ ಅಂಕಣಗಳಲ್ಲಿ ರತಿಯ ವಿವಿಧ ಭಂಗಿಯ ರತಿಕ್ರೀಡೆಯ ಚಿತ್ರಗಳನ್ನು ಚಿತ್ರಿಸಲಾಗಿದೆ. ಸ್ತ್ರೀ ಪುರುಷರು ರಾಜಪೋಷಾಕಿನೊಂದಿಗೆ ಅಂದರೆ ತೆಳುವಾದ ಚಿತ್ರಾಲಂಕೃತ ವಸ್ತ್ರಗಳನ್ನು ಧರಿಸಿ ಕೆಲವುಕಡೆಯಲ್ಲಿ ನಗ್ನತೆಯ ಅಂಗಾಂಗ ಪ್ರದರ್ಶನವು ಉಂಟು. ಸ್ತ್ರೀಯು ತೆಳುವಾದ ರವಿಕೆ ಮತ್ತು ಸೀರೆ ಅಥವಾ ನಿಲುವಂಗಿ ಅದರ ತುಂಬ ಚಿತ್ತಾರ ಕೆಲವು ಕಡೆ ತುರುಬಕಟ್ಟಿದಂತೆ ಕೆಲವೆಡೆ ಬಿಚ್ಚಿದ ಮುಡಿಯಲ್ಲಿ, ಪುರುಷರು ತಲೆಗೊಂದು ರುಮಾಲು, ನಿಲುವಂಗಿ ಅದರ ತುಂಬ ಚಿತ್ತಾರ, ಕೆಳಗೆ ಮೆತ್ತನೆಯ ಹಾಸಿಗೆ ದಿಂಬುಗಳು ಅವುಗಳಲ್ಲಿ ಹೂಬಳ್ಳಿ ನಕ್ಷಾಲಂಕಾರ ಚಿತ್ರಣಗೊಂಡಿವೆ. ಈ ಚಿತ್ರಗಳು ರತಿ ಕ್ರೀಡೆಗೆ ಪ್ರೇರೇಪಿಸುವಂತೆ ಎಲ್ಲವೂ ಪೂರಕ. ಒಂದರಂತೆ ಮತ್ತೊಂದು ಬಾರದಂತೆ ಕಲಾವಿದನು ಚಿತ್ರಗಳಲ್ಲಿ ಅಂಗರಚನೆಯನ್ನು ಮರೆತು ಭಂಗಿಗೆ ಮಾತ್ರ ಒತ್ತು ನೀಡಿರುವುದು ಸ್ಪಷ್ಟವಾಗಿ ಕಾಣುತ್ತದೆ. ಇಲ್ಲಿ ಮೂಲ ಉದ್ದೇಶ ಸಂಭೋಗ ಕ್ರಿಯೆಯ ಭಂಗಿಗಳು ಸ್ಪಷ್ಟವಾಗಿ ಗೋಚರಿಸಬೇಕು ಎಂಬುದು ಕಲಾವಿದನ ಉದ್ದೇಶವಾಗಿದ್ದಿರಬೇಕು. ರತಿಕ್ರಿಯೇಯಲ್ಲಿ ಪಾಲ್ಗೊಂಡಿರುವ ಸ್ತ್ರೀಪುರುಷರ ಕೈ ಮತ್ತು ಕಾಲುಗಳು ಅಳತೆ ಮೀರಿ ಚಿತ್ರಿಸಲಾಗಿದೆ. ಹಿಂದಿನಿಂದ, ಮುಂದಿನಿಂದ, ನಿಂತು, ಕುಳಿತು, ಮಲಗಿ, ಎರಡಕ್ಕಿಂತ ಹೆಚ್ಚು ಸ್ತ್ರೀಯರನ್ನು ಒಬ್ಬನೇ ಪುರುಷ ಸಂಭೋಗಿಸುವುದು. ಹೀಗೆ ಹಲವಾರು ರೀತಿಯ ಭಂಗಿಗಳನ್ನು ಚಿತ್ರಿಸುವಾಗ ಕಲಾವಿದನು ಅಂಗ ರಚನೆಯನ್ನು ಭಂಗಿಗೆ ಅನುಗುಣವಾಗಿ ಹಾಗೂ ಭಂಗಿಯು ಸ್ಪಷ್ಟವಾಗಿ ತಿಳಿಯುವಂತೆ ರಚಿಸುವ ಉದ್ದೇಶ ಹೊಂದಿದ್ದಾನೆ.

ದೇವಾಲಯಗಳಲ್ಲಿ ಈ ರೀತಿಯ ರತಿಲಾಸ್ಯದ ಚಿತ್ರಗಳು ಶಿಲ್ಪಗಳು ರಚನೆಗೊಳ್ಳುವ ಉದ್ದೇಶವು ಹಲವಾರು ರೀತಿಯಿಂದ ಕೂಡಿವೆ. ಹಲವಾರು ವಿದ್ವಾಂಸರು ಒಂದೊಂದು ರೀತಿಯಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ದೇವಾಲಯಕ್ಕೆ ಬರುವ, ಬರದಿರುವ ಆಸ್ತಿಕ ನಾಸ್ತಿಕರು ರಾಮ ಕ್ರಿಯೆಯೇ ಮುಖ್ಯವೆಂದು ಭಾವಿಸಿ ತೊಡಗಿರುವುದನ್ನು ಬಿಟ್ಟು ದೇವಾಲಯದತ್ತ ಬರಲಿ. ಕಾಮ ಎಂಬುದು ಪ್ರಾಣಿ ಸಹಜ ಕ್ರಿಯೆ. ಇದು ಪ್ರಕೃತಿ ಸಹಜವಾದು ಮತ್ತು ಸಾರ್ವತ್ರಿಕವಾದುದು. ಮುಕ್ತ ಲೈಂಗಿಕ ಕ್ರಿಯೆಗೆ ಅವಕಾಶ ನೀಡಬೇಕು. ದೇವಾಲಯಕ್ಕೆ ಬರುವ ಭಕ್ತರು ಕಾಮವನ್ನು ಅಲ್ಲಿಯೇ ಬಿಟ್ಟು ನಿರ್ಮಲ ಮನಸ್ಸಿನಿಂದ ದೇವರ ದರ್ಶನ ಮಾಡಬೇಕು. ಲೈಂಗಿಕ ಶಿಕ್ಷಣವನ್ನು ಸಾರ್ವತ್ರಿಕವಾಗಿ ನೀಡುವ ಸಲುವಾಗಿ ಲೈಂಗಿಕತೆಯಲ್ಲಿ ಮುಕ್ತವಿಲ್ಲದವರು, ರತಿಕ್ರೀಡೆಗೆ ಭಯಪಡುವವರು, ಕಾಮವು ಮಾನವನ ಒಂದು ಸಹಜ ಪ್ರವೃತ್ತಿ ಮತ್ತು ಮೋಕ್ಷಕ್ಕೆ ಸಹಾಯಕವಾದ ಪುರಷಾರ್ಥ, ಸ್ತ್ರೀ ಪುರುಷರು ಒಬ್ಬರಿಗೊಬ್ಬರು ಆಕರ್ಷಣೆಗೊಳ್ಳಲು ಮುಕ್ತ ಅವಕಾಶ ಹೊಂದಲು ಚಿತ್ರಿಸಿರಬಹುದು. ಹೀಗೆ ಹಲವಾರು ಉದ್ದೇಶಗಳನ್ನು ಹೊಂದಿರುವ ಲೈಂಗಿಕ ಚಿತ್ರ ಶಿಲ್ಪಗಳು ಸಾರ್ವಜನಿಕ ಸ್ಥಳಗಳಿಗೆ ಉದ್ದೇಶ ಪೂರ್ವಕವಾಗಿ ರಚನೆಯಾಗಿದೆ ಎಂಬುದು ಹಲವು ಅಭಿಪ್ರಾಯ. ಈ ರೀತಿಯ ಒಂದು ಪ್ರಯೋಗಾತ್ಮಕ ಚಿತ್ರಗಳು ಸೀಬಿಯ ರಾಜಗೋಪುರದ ಛಾವಣಿಯಲ್ಲಿ ರಚನೆಗೊಂಡಿವೆ.

ಈ ಚಿತ್ರಗಳು ಸಮವಾಗಿ ಚೌಕಗಳನ್ನಾಗಿಸಿಕೊಂಡು ತೊಲೆಗಳ ಸಮೇತ ಚಿತ್ರಗಳು ಚಿತ್ರಿಸಲಾಗಿದೆ. ಸಾಮಾನ್ಯವಾಗಿ ಕೆಂಪು ಹಿನ್ನೆಲೆಯನ್ನು ಹೊಂದಿದ್ದು, ಹಳದಿ, ಹಸಿರು, ಶ್ವೇತ ವರ್ಣಗಳನ್ನು ಬಳಸಲಾಗಿದೆ. ಬಾಹ್ಯರೇಖೆಯನ್ನು ಕಪ್ಪು ಬಣ್ಣದಿಂದ ಎಳೆಯಲಾಗಿದೆ. ಈ ರೀತಿಯ ಚಿತ್ರಗಳು ಭಿತ್ತಿ ಚಿತ್ರಗಳ ರಚನೆಯಾದ ಕಡೆಯಲೆಲ್ಲ ಸಾಮಾನ್ಯವಾಗಿ ಚಿತ್ರಿಸಿರುವುದು ಕಂಡುಬರುತ್ತದೆ. ಕೆಲವು ದೇವಾಲಯದಲ್ಲಿ ಇಂತಹ ಚಿತ್ರಗಳು ವಿಲಕ್ಷಣವೆಂದು ತಿಳಿದು ಹಾಳುಮಾಡಿರುವುದು ಉಂಟು.

**ಶಿರಾ**

ಶಿರಾ ತುಮಕೂರಿನಿಂದ ೮೫ ಕಿ.ಮೀ ದೂರದ ರಾಷ್ಟ್ರೀಯ ಹೆದ್ದಾರಿಯಲ್ಲಿದೆ. ಶಿರಾ ಹಿಂದೆ ಪ್ರಾಗೈತಿಹಾಸ ಕಾಲದಿಂದ ಹಲವಾರು ರಾಜರು ಆಡಳಿತಕ್ಕೆ ಒಳಗಾಗಿರುವ ಹಾಗೂ ಕೇಂದ್ರ ಸ್ಥಳವಾಗಿ ಕೋಟೆ ಕೊತ್ತಲುಗಳಿಂದ ಕಂಗೊಳಿಸುವ ಐತಿಹಾಸಿಕ ನಗರ. ನಗರದಲ್ಲಿನ ಕಾಳಿದಾಸ ನಗರದ ಶ್ರೀ ರೇವಣಸಿದ್ದೇಶ್ವರ ದೇವಾಲಯವು ಸುಂದರವಾದ ಭಿತ್ತಿ ಚಿತ್ರಗಳನ್ನು ಒಳಗೊಂಡಿದೆ. ಈ ದೇವಾಲಯವು ಕುರುಬ ಜನಾಂಗಕ್ಕೆ ಸೇರಿದ್ದು ಕುರುಬ ಜನಾಂಗದ ಜಾತಕ ಕಥೆಯನ್ನು ಹೇಳು ಚಿತ್ರವೂ ಸಹ ಈ ದೇವಾಲಯದ ಮುಖ್ಯ ವಸ್ತು ವಿಷಯವಾಗಿದೆ. ದೇವಾಲಯವು ಸುಮಾರು ೧೦ ಮತ್ತು ೧೫ ಅಡಿ ಅಗಲವಿರುವ ಹಜಾರ ಪುಟ್ಟದೊಂದು ಗರ್ಭಗುಡಿಯನ್ನು ಹೊಂದಿದೆ. ಚೊಕ್ಕ ಪುಟ್ಟದೇವಾಲಯ, ದೇವಾಲಯದ ಹಜಾರದ ಛಾವಣಿ ಮತ್ತು ತೊಲೆ, ಹಾಗೂ ಸುತ್ತಲಿನ ಗೋಡೆಯ ಮೇಲೆ ಅದ್ಭುತವಾದ ಭಿತ್ತಿ ಚಿತ್ರರಚನೆಗೊಂಡಿರುವುದು ಆಶ್ಚರ್ಯವೇ ಸರಿ. ಈ ದೇವಾಲಯವನ್ನು ಹೊರಗಿನಿಂದ ನೋಡಿದರೆ

ಯಾವುದೇ ವಿಶೇಷಗಳು ಕಾಣುಬರುವುದಿಲ್ಲ. ಅದರ ಒಳ ಹೊಕ್ಕಂತೆ ಬೆಚ್ಚಿ ಬೆರಗಾಗಿಸುವ ಭಿತ್ತಿ ಚಿತ್ರಗಳ ಕಣವೆಂದೆನಿಸುವಷ್ಟು ಸುಂದರವಾದ ಭಿತ್ತಿ ಚಿತ್ರಗಳಲ್ಲಿ ರಚನೆಗೊಂಡಿವೆ.

ಹಜಾರದ ಛಾವಣಿ, ತೊಲೆಗಳು ಮತ್ತು ಸುತ್ತಲನ ಗೋಡೆಗಳ ಮೇಲೆ ಚಿತ್ರಗಳಿವೆ. ಆದರೆ ಪ್ರಸ್ತುತ ದಿನದಲ್ಲಿ ಹಿಂದಿದ್ದ ಕಾಲಭಾಗದಷ್ಟು ಚಿತ್ರಗಳು ಮಾತ್ರ ಉಳಿದಿವೆ. ಇಲ್ಲಿಯೂ ಸಹ ರಾಮಾಯಣ ಮಹಾಭಾರತಕ್ಕೆ ಸಂಬಂಧಿಸಿದ ಚಿತ್ರಗಳು ರಚನೆಗೊಂಡಿವೆ. ಮತ್ತೊಂದು ವಿಶೇಷವೆಂದರೆ ಸುತ್ತಲಿನ ಗೋಡೆಯ ಮೇಲೆ, ಆಂಜನೇಯ, ರಾಮ ಪಟ್ಟಾಭಿಷೇಕ, ಗೋಪಿಕೆಯ ವಸ್ತ್ರಾಪಹರಣ, ವೇಣುಗೋಪಾಲ, ಗರುಡ, ಕುರುಬ ಜನಾಂಗದ ಉಗಮದ ಚಿತ್ರ, ಹಾಗೂ ಮೈಸೂರು ಅರಸರ ದರ್ಬಾರು ದೃಶ್ಯಗಳು ಸುಮಾರು ೨x೩ ಅಡಿ ಅಳತೆಯಲ್ಲಿ ರಚನೆಗೊಂಡಿವೆ. ಸಧ್ಯ ಈ ಮೇಲಿನ ಚಿತ್ರಗಳು ಮಾತ್ರ ಉಳಿದುಕೊಂಡಿವೆ. ಹಿಂದಿನಿಂದಲೂ ಅವುಗಳ ಮೇಲೆ ಸುಣ್ಣ ಲೇಪಿಸಲಾಗಿದೆ. ಅಲ ನರಸಿಂಹನ್‌ರವರ ಪರಿವೀಕ್ಷಣೆಯ ಸಂದರ್ಭದಲ್ಲಿ ಸುಣ್ಣವನ್ನು ತೊಳೆದಾಗ ಕಂಡುಬಂದು ಚಿತ್ರಗಳಾಗಿದೆ. ಉಳಿದ ಚಿತ್ರಗಳು ಪದರ ಪದರವಾಗಿ ಬಿದ್ದುಹೋಗಿವೆ. ಹಾಗೂ ಮೈಸೂರು ಅರಸರ ದರ್ಬಾರು ದೃಶ್ಯದ ಮೇಲೆ ವಿದ್ಯುತ್ ಅಳತೆ ಮಾಪನವನ್ನು ಗೋಡೆಗೆ ಹೊಂದಿಸುವ ಸಲುವಾಗಿ ಹಾಳಾಗಿದೆ. ಈ ಮೇಲಿನ ಚಿತ್ರಗಳು ಗರ್ಭಗುಡಿಯ ಬಲಭಾಗದ ಗೋಡೆಯಲ್ಲಿ ಆಂಜನೇಯನ ಚಿತ್ರ ಮಾತ್ರ ಉಳಿದಿದೆ. ಎಡಭಾಗದ ಪೂರ್ಣ ಗೋಡೆಯು ಚಿತ್ರಗಳಿಂದ ಆವೃತವಾಗಿವೆ.

ಇಲ್ಲಿ ರಚಿಸಿರುವ ಚಿತ್ರವು ನುರಿತ ಕಲಾವಿದರಿಂದ ರೂಪ ಪಡೆದಿವೆ. ಅವು ಭಿತ್ತಿ ಚಿತ್ರಗಳ ವಿಧಿವಿಧಾನದ ಆಧಾರದ ಮೇಲೆ ಬಣ್ಣಗಾರಿಕೆ ರೇಖೆಗಳು ಪ್ರಬುದ್ಧವಾಗಿದ್ದು ಅತ್ಯಂತ ಸುಂದರವಾದ ಚಿತ್ರಗಳೆನಿಸಿವೆ. ಎಲ್ಲಿಯೂ ಕೂಡ ಕಾಟಾಚಾರದ ಕೆಲಸ ನಡೆದಿಲ್ಲ. ಅಂದಿನ ದೇಹ ರಚನೆ ಶಾಸ್ತ್ರದ ಆಧಾರದ ಮೇಲೆ ರಚಿತವಾದ ಚಿತ್ರಗಳಾಗಿವೆ. ಸೀಬಿ ಕೆರೆಗೋಡಿ ರಂಗಾಪುರ, ತುಮಕೂರು ನಲ್ಲಪ್ಪನವರ ಮನೆ ಸೇರಿದಂತೆ ಚಿತ್ರ ರಚನೆಯು ಚಿಕ್ಕ ಚಿಕ್ಕ ಅಂಕಣಗಳಲ್ಲಿ ರಚನೆಗೊಂಡಿರುವುದನ್ನು ಕಾಣುತ್ತೇವೆ. ಆದರೆ ಈ ದೇವಾಯದಲ್ಲಿ ಕಡಿಮೆ ಆಯ್ಕೆಯ ಚಿತ್ರಗಳಾಗಿದ್ದು ಅವೆಲ್ಲವು ದೊಡ್ಡದಾಗಿದ್ದು ಲೈಫ್‌ಸೈಜ್‌ನ ಚಿತ್ರಗಳನ್ನು ಚಿತ್ರಿಸಲಾಗಿದೆ. ವಿಶೇಷವಾಗಿ ಇಲ್ಲಿರುವಷ್ಟು ಪ್ರಮಾಣದಲ್ಲಿ ಆಂಜನೇಯ, ಗರುಡ, ಗೋಪಿಕಾ ವಸ್ತ್ರಾಪಹರಣ, ವೇಣುಗೋಪಾಲ, ಮುಂತಾದ ಚಿತ್ರಗಳು ಬೇರೆಲ್ಲೂ ಚಿತ್ರಿಸಿಲ್ಲ. ಎಲ್ಲವೂ ಕೆಂಪು ಬಣ್ಣದ ಹಿನ್ನೆಲೆಯನ್ನು ಸಾಮಾನ್ಯವಾಗಿ ಬಳಸಲಾಗಿದೆ. ಛಾವಣಿ ಮತ್ತು ತೊಲೆಯಲ್ಲಿದ್ದ ಚಿತ್ರಗಳ ಮಾಹಿತಿಯು ಲಭ್ಯವಿಲ್ಲ. ಭಿತ್ತಿ ಚಿತ್ರಗಳ ಅತ್ಯತ್ತಮ ರಚನೆಯಲ್ಲಿ ಈ ದೇವಾಲಯವು ಮೊದಲ ಸಾಲಿನಲ್ಲಿ ನಿಲ್ಲುತ್ತದೆ.

ಆಂಜನೇಯನು ರಾಕ್ಷಸ ಸಂಹಾರದ ದೃಶ್ಯ, ಗೋಪಿಕಾ ವಸ್ತ್ರಾಪಹರಣದಲ್ಲಿ ನಗ್ನರಾಗಿರುವ ಗೋಪಿಕೆಯರು, ನೀರಿನಲ್ಲಿ, ಮೀನು, ಮೊಸಳೆ, ಏಡಿ, ಆಮೆ, ಕಪ್ಪೆ, ಹಾವು ಮುಂತಾದ ಜಲಚರ ಸರಿಸೃಪಗಳು ಒಳಗೊಂಡಂತೆ ನಗ್ನ ಸಾರ್‍ಯವತಿಯರು ತಮ್ಮ ದೇಹ ಸೌಂದರ್ಯವನ್ನು ಮರೆಮಾಚಿಸುವ

ಪ್ರಯತ್ನದಲ್ಲಿದ್ದಾರೆ. ಶ್ರೀರಾಮನ ಪಟ್ಟಾಭಿಷೇಕಕ್ಕೆ ದೇವಾನುದೇವತೆಗಳು, ಆಂಜನೇಯ, ತುಂಬುರ, ನಾರದ, ಗಣಪತಿ, ಕಪಿಸೈನ್ಯ ಗಂಧರ್ವ ದೇವತೆಯರೊಡಗೂಡಿದ ದೇವತಾ ಸಮೂಹವನ್ನು ಚಿತ್ರಿಸಲಾಗಿದೆ. ಆಳುದ್ದದ ಗರುಡ ಸರ್ಪವನ್ನತಿದ್ದು ನಿಂತಿರುವ ಚಿತ್ರವು ರೌರ್ಧದಿಂದ ಕೂಡಿದೆ. ವೇಣುಗೋಪಾಲನು ಕೊಳನ್ನು ನುಡಿಸುತ್ತಾ ನಿಂತ ಭಂಗಿಯಲ್ಲಿದ್ದು ಹಿಂದೆ ಸುಂದರವಾದ ಆಕಳಿನ ಚಿತ್ರ ಹಾಗೂ ಸುಂದರ ಮರವೊಂದರ ಮಧ್ಯದಲ್ಲಿ ನಿಂತಿರುವ ಗೋಪಾಲನ ಚಿತ್ರವಿ ಕೃಷ್ಣನ ಕೊಳಲಿನ ನಾದಕ್ಕೆ ತಲೆದೂಗಿ ಬಂದಿರುವ ಆಕಳು, ಆಕಳನ್ನು ಹಿಂಬಾಲಿಸುತ್ತಿರುವ ಗೂಳಿ ಕೃಷ್ಣನ ಎರಡೂ ಬದಿಯಲ್ಲಿ ಗೋಪಿಕೆಯರು, ತಲೆಯ ಮೇಲೆ ಕೊಡ ಹೊತ್ತು ನಿಂತಿರುವುದು, ಎಡಬದಿಯಲ್ಲಿ ಗೋಪಿಕೆಯ ಹಿಂದೆ ಒಬ್ಬ ಗಡ್ಡದಾರಿ ಅರೆ ನಗ್ನವಾಗಿ ನಿಂತಿರುವ, ಒಬ್ಬ ವ್ಯಕ್ತಿಯ ಚಿತ್ರವು ಕುಬ್ಜವಾಗಿದ್ದುದು ಚಿತ್ರಿಸಲಾಗಿದೆ. ಆಕಳು, ಗೂಳಿಗಳ ಚಿತ್ರವು ಆಕರ್ಷಕವಾದ ಮೈಕಟ್ಟು ಹೊಂದಿದವುಗಳಾಗಿವೆ.

ಮುಂದೆ ಉಗ್ರನರಸಿಂಹನ ಚಿತ್ರವಿದ್ದು, ನರಸಿಂಹನು ರೌದ್ರಾವತಾರದಲ್ಲಿ ಹಿರಣ್ಯಕಶ್ಯಪನ ಉದರ ಸೀಳುತ್ತಿರುವುದು ಎಂಟುಕೈಗಳುಳ್ಳ ನರಸಿಂಹನ ಚಿತ್ರವು ಅತ್ಯಂತ ಉತ್ತಮವಾದ ಚಿತ್ರವಾಗಿದೆ. ಕುರುಬರ ಜಾತಕ ಕಥೆಯನ್ನು ಹೇಳುವ ಚಿತ್ರವಿದ್ದು ಇಲ್ಲಿ ಕುರಿ ಮಂದೆ, ಹುತ್ತ ಹುತ್ತದಿಂದ ಹಾವುಗಳು ಕೋಟೆಯಿಂದ ಕುರಿಗಳು ಹೊರ ಬರುವಂತೆ ಚಿತ್ರಿಸಲಾಗಿದೆ. ಒಬ್ಬ ಕುರಿಕಾಯುವ ವ್ಯಕ್ತಿ ಬೃಹದಾಕಾರವಾದ ಮರ ಮರದಲ್ಲಿ ಗಿಳಿ, ಕೋತಿ, ಮುಂತಾದ ಪ್ರಾಣಿಗಳು, ಅದೇ ಅಂಕಣದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ನಗರ ವೀಕ್ಷಣೆಗೆಂದು ಹೊರಟಂತೆ, ಸೇವಕರು ಚಾಮರವನ್ನ ಹಿಡಿದು ಸಾಗುತ್ತಿದ್ದಾರೆ. ಹುತ್ತದಿಂದ ಸರ್ಪವೊಂದು ಕಾಣಿಸಿಕೊಂಡಿದೆ.

ಮೇಲೆ ತಿಳಿಸಿರುವ ಚಿತ್ರಗಳ ತಲೆಯಲಿನ ಸಾಲಿನಲ್ಲಿ ಸೈನಿಕರು, ವಾಧ್ಯಗಾರರು, ನರ್ತಕಿಯರು, ಕುದುರೆ ಸವಾರರು ಜನಸಾಮಾನ್ಯರನ್ನೊಳಗೊಂಡ ಸಾಮಾಜಿಕ ದೃಶ್ಯಗಳನ್ನು ಚಿತ್ರಿಸಲಾಗಿದೆ. ಇವರು ತಲೆಗೊಂದು ರುಮಾಲು, ಅಂಗಿ ಪೈಜಾಮುಗಳನ್ನು ತೊಟ್ಟಿದ್ದಾರೆ. ಇವುಗಳು ಅಲಂಕಾರಿಕ ನಕ್ಷೆಗಳಿಂದ ಕೂಡಿದ ವಸ್ತ್ರಗಳಾಗಿವೆ. ಕೊನೆಯದಾಗಿ ಮುಮ್ಮಡಿಯವರ ದರ್ಬಾರು ದೃಶ್ಯವಿದ್ದು ಪ್ರಸ್ತುತ ಅದರ ಮೇಲೆ ಸಿಮೆಂಟ್ ಮಾಡಲಾಗಿದೆ. ಇಲ್ಲಿನ ಎಲ್ಲಾ ಚಿತ್ರಗಳ ಮಧ್ಯದಲ್ಲಿ ದೀಪವಿಡುವ ಗೂಡುಗಳಿದ್ದು ಅವುಗಳಿಗೂ ಸಹ ಹಂಸ, ಗಿಳಿಗಳ ಅಲಂಕಾರಿಕ ಮಾದರಿಯಲ್ಲಿ ಶೃಂಗರಿಸಿದ್ದಾರೆ. ಎಲ್ಲವೂ ಉತ್ತಮ ಕಮಾನುಗಳಿಂದ ಕೂಡಿದ್ದು ಮೈಸೂರು ಅರಮನೆಯ ಕಟ್ಟಡದ ಮಾದರಿಯಲ್ಲಿವೆ. ಇದೇ ರೀತಿ ವಿಜಯನಗರದ ಭಿತ್ತಿ ಚಿತ್ರಗಳಲ್ಲೂ ಚಿತ್ರಿಸಲಾಗಿದೆ. ಇವುಗಳಿಗೆ ವಿಜಯನಗರದ ಕಲಾವಿದರು ಹಾಗೂ ಅಲ್ಲಿಯ ಕಲಾಶೈಲಿ ಪ್ರೇರಣೆ ನೀಡಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಅಲ್ಲದೆ ಸುರಪುರ ಶೈಲಿಯಲ್ಲಿ ಬಳಸಲಾದ ಅಲಂಕಾರಿಕ ವಿಶೇಷ ಶೈಲಿಯ ತೂಗು ದೀಪಗಳನ್ನು ಇಲ್ಲಿಯೂ ಬಳಸಲಾಗಿದೆ. ಇದೇ ಮಾದರಿಯನ್ನು ರಂಗಾಪುರದ ಭಿತ್ತಿ ಚಿತ್ರದಲ್ಲಿ ಕೆಲವು ಕಡೆ ಬಳಸಲಾಗಿದೆ. ಇದರಿಂದ ಅಲ್ಲಿ ನುರಿತ ಕಲಾವಿದರು ಮುಂದುವರೆದಂತೆ ಇಲ್ಲಿಯೂ ಕೃತಿ ರಚನೆ ಕೆಲಸದಲ್ಲಿ ತೊಡಗಿದ್ದಾರೆ ಎನ್ನುವುದು ತಿಳಿದು ಬರುತ್ತದೆ.

ಈಗ ಉಳಿದಿರುವ ಚಿತ್ರಗಳನ್ನು ಬಿಟ್ಟರೆ ಉಳಿದ ಕಡೆಗೆಲ್ಲಾ ಸುಣ್ಣ ಬಳಿದು ಹಾಳಾಗಿದೆ. ಎಸ್.ವೆಂಕಟೇಶರವರು ಒಂದು ಲೇಖನದಲ್ಲಿ ಗಣಪತಿ, ಸೀತಾಕಲ್ಯಾಣ, ಅಹಲ್ಯೋಧ್ಧಾರ, ಅಷ್ಟದಿಕ್ಪಾಲಕರು, ವೆಂಕಟೇಶ್ವರ, ಪೂಜಾರಿ, ಮಂಗಳ ದ್ರವ್ಯ ಹಿಡಿದ ಸುಂದರಾಂಗಿಯರು, ಚಾಮರ ಧಾರಿಣಿಯರು ರಾಮ ರಾವಣರ ಯುದ್ಧ ಮುಂತಾದ ನೂರಾರು ಚಿತ್ರಗಳು ಇದ್ದವು. ಎಂದು ತಿಳಿಸಿದ್ದಾರೆ. ಆದರೆ ಪ್ರಸ್ತುತ ಸುಣ್ಣದಿಂದ ಮುಚ್ಚಲಾಗಿದೆ. ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸುಣ್ಣವನ್ನು ಕೆರೆದು ನೋಡಿದಾಗ ಅವುಗಳ ಸುಳಿವು ಕಾಣದೆ ಹೋಯಿತು. ದೇವಾಲಯದ ಮುಖ್ಯಸ್ಥರು ಅದಕ್ಕೆ ಅನುಮತಿಯನ್ನು ಕೊಡಲಿಲ್ಲ. ಈಗಿರುವ ಚಿತ್ರಗಳ ಮೇಲೂ ಪ್ರತೀವರ್ಷ ಸುಣಹೊಡೆಯುವಾಗ ಅವುಗಳ ಮಹತ್ವ ತಿಳಿಯದೆ ಸುಣ್ಣ ಸಿಡಿಸಿದ್ದಾರೆ. ಒಟ್ಟಾರೆ ಭಿತ್ತಿ ಚಿತ್ರಗಳಿಗೆ ಅಷ್ಟೊಂದು ರಕ್ಷಣೆ ಇಲ್ಲದಂತಾಗಿದೆ.

**ಬೆನಕನಕೆರೆ**

ಬೆನಕನಕೆರೆಯು ತುರುವೇಕೆರೆ ತಾಲ್ಲೂಕಿನ ಕೊನೆಯ ಪುಟ್ಟ ಗ್ರಾಮ. ತುರುವೇಕೆರೆ ಮತ್ತು ನಾಗಮಂಗಲಕ್ಕೆ ಹೋಗುವ ಮಾರ್ಗ ಮಧ್ಯದಲ್ಲಿ ಬೆನಕನಕೆರೆ ಇದೆ. ಹಳೆ ಮೈಸೂರು ಆಡಳಿತ್ಕೆ ಸೇರುವ ಈ ಗ್ರಾಮದಲ್ಲಿ ಹಲವಾರು ಪುರಾತನ ಕಲಾತ್ಮಕ ವಾಸ್ತುಶಿಲ್ಪಗಳುಳ್ಳ ದೇವಾಲಯಗಳು ಈ ಗ್ರಾದ ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತವೆ. ಸಣ್ಣ ಗುಡ್ಡದ ಮೇಲೆ ಚನ್ನಕೇಶವ ದೇವಾಲಯವಿದೆ. ದೇವಾಲಯವು ಸಾಧಾರಣವೆನಿಸಿದರೂ ಇಟ್ಟಿಗೆ ಗಾರೆಗಳಲ್ಲಿ ರಚಿಸಲಾಗಿದೆ. ಎರಡು ಜಗಲಿ, ಹಜಾರ, ಒಂದು ಗರ್ಭಗುಡಿಯನ್ನು ಹೊಂದಿದೆ. ಪ್ರಸ್ತುತನದಲ್ಲಿ ಈ ದೇವಾಲಯವು ಅವಸಾನದ ಅಂಚಿನಲ್ಲಿದ್ದು ದೇವಾಲಯದ ಪೂಜೆ ಕಾರ್ಯ ನಿಂತುಹೋಗಿದೆ. ದೇವಾಲಯದ ಮುಚ್ಚಳಿಕೆಯಿಂದ ನೀರಿಳಿದು ದೇವಾಲಯವು ಯಾವಾಗಲಾದರು ಬೀಳಬಹುದು ಎನ್ನುವ ಆತಂಕದಲ್ಲಿ ಸಾರ್ವಜನಿಕರು ಅದರಲ್ಲಿ ಪ್ರವೇಶಿಸುವುದಿಲ್ಲ. ದೇವಾಲಯದ ಹಜಾರದಲ್ಲಿ ಭಿತ್ತಿ ಚಿತ್ರಗಳಿದ್ದು ಈ ಚಿತ್ರಗಳು ಅಷ್ಟೊಂದು ಹಳೆಯದಲ್ಲವಾದರೂ ಸುಮಾರು ಎಂಟು ದಶಕಗಳನ್ನು ಕಳೆದಿವೆ ಎಂಬುದು ಅಲ್ಲಿನ ಬಲ್ಲಮೂಲಗಳಿಂದ ತಿಳಿದು ಬರುತ್ತದೆ. ಇಲ್ಲಿನ ಚಿತ್ರಗಳು ಯಾವುದೇ ಆಗಮ ಶಾಸ್ತ್ರಗಳ ಆಧಾರದ ಮೇಲೆ ರಚನೆಯಾಗಿಲ್ಲ. ಜೊತೆಗೆ ಸಾಂಪ್ರದಾಯಿಕ ಭಿತ್ತಿ ಚಿತ್ರಕಾರರು ಈ ಚಿತ್ರಗಳನ್ನು ರಚಿಸಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಇಲ್ಲಿನ ಚಿತ್ರಗಳು ಸಹಜವಾದ ಜಾನಪದ ಶೈಲಿಯಲ್ಲಿದ್ದು ಇಲ್ಲಿಯ ಪೈಂಯಿಂಟರ್ ಎಂ.ಎಲ್.ಸಿ.ಲಿಂಗಾಚಾರ್ಯ ಎನ್ನುವವರು ಇಲ್ಲಿನ ಚಿತ್ರಗಳನ್ನು ಬರೆದಿರುವುದು ದೇವಾಲಯದ ಮುಖ್ಯದ್ವಾರದ ಮೇಲೆ ಬರೆಯಲಾಗಿದೆ. ಜೊತೆಗೆ ಇಸವಿ ಬರೆದಿದ್ದಾರೆ. ಅದು ಸ್ಪಷ್ಟವಾಗಿ ಕಾಣುತ್ತಿಲ್ಲ. ಈ ಕಲಾವಿದನು ರಾಮಾಯಣ ಮಹಾಭಾರತದ ಕೆಲವು ಜನಪರಿಚಿತ ಸನ್ನಿವೇಷಗಳನ್ನು ಮೊದಲೇ ಒಂದು ಪುಸ್ತಕಾಲಯದಲ್ಲಿ ಬರೆದುಕೊಂಡು ಬೇಕಾದವರಿಗೆ ತೋರಿಸಿ ಆಯ್ಕೆ ಚಿತ್ರಗಳನ್ನು ಬರೆಯುವುದು ಇವನ ಕಸುಬು. ಅದೇ ರೀತಿ ಇಲ್ಲಿಯ ಊರ ಮುಖ್ಯಸ್ಥರು ಶ್ರೀ ಚನ್ನಕೇಶವ ದೇವಾಲಯದ ಹಜಾರದ ಸುತ್ತಲೂ ಲಕ್ಷ್ಮಿ, ಸರಸ್ವತಿ, ಸಂಜೀವಿನಿ, ಪರ್ವತಾರೂಢ ಆಂಜನೇಯ, ಗರುಡ, ಚನ್ನಕೇಶವ, ಚಿತ್ರಗಳು ಶಿರಾದ ರೇವಣ ಸಿದ್ಧೇಶ್ವರ ದೇವಾಲಯದ ಮಾದರಿಯಲ್ಲಿ ವಿಶಾಲವಾದ ಅಂಕಣದಲ್ಲಿ ರಚಿಸಲಾಗಿದೆ. ಸುತ್ತಲಿನ

ತೊಲೆಯ ಮೇಲೆ ದಶಾಮಾರದ ದೃಶ್ಯಗಳು, ರಾಮಾಯಣದ ಕೆಲವು ಸನ್ನಿವೇಶಗಳು ಅಂದರೆ, ರಾಮನವನವಾಸ, ಸೀತಾಪಹರಣ, ಲಂಕಾದಹನ, ರಾಮರಾವಣ ಯುದ್ಧ, ಕುಂಬಕರ್ಣ, ಸೀತೆಯಿಂದ ಮುದ್ರೆ ಪಡೆಯುತ್ತಿರುವುದು. ಶ್ರೀರಾಮ ಪಟ್ಟಾಭಿಷೇಕ, ಹನುಮಂತನ ಸಾಗರೋಲಂಘನ, ವಾಲಿಸುಗ್ರೀವರ ಯುದ್ಧ, ಹನುಮಂತ ತಾಟಕಿಯರ ಯುದ್ಧ ಮುಂತಾದ ರಾಮಾಯಣದ ನೆನಪಿಗೆ ಬರುವ ಸನ್ನಿವೇಶಗಳನ್ನು ತನಗೆ ತಿಳಿದಂತೆ ಯಾವುದೇ ಶಾಸ್ತ್ರದ ಪ್ರೇರಣೆ ಇಲ್ಲದೆ ಅದರ ಯಾವುದೇ ಗೋಜಿಗೂ ಹೋಗದೆ ಹಿರಿಯರಿಂದ ಬಂದ ಕಲೆಯ ಅನುಕರಣೆಯಂತೆ ಜನಪದ ಶೈಲಿಯ ಚಿತ್ರಗಳನ್ನು ಚಿತ್ರಿಸಿದ್ದಾನೆ. ಕಲಾವಿದನ ಕಾಲದ ಕೆಲವು ದೃಶ್ಯಗಳನ್ನು, ಚಿತ್ರದಲ್ಲಿ ಬಳಸಿರುವುದು ಕಂಡು ಬರುತ್ತದೆ. ಉದಾಹರಣೆಗೆ ಲಂಕೆಯನ್ನು ತೋರಿಸುವಾಗ ವಿಷಾಲವಾದ ಬೀದಿ ದೀಪಗಳು, ಬಹುಮಹಡಿ ಕಟ್ಟಡಗಳು, ಕಾರು, ಸೈಕಲ್, ಕುದುರೆ ಬಂಡಿ ಹೀಗೆ ಹಲವಾರು ಅಂಶಗಳನ್ನು ಚಿತ್ರದಲ್ಲಿ ಕಾಣಿಸಲಾಗಿದೆ. ಹಾಗೂ ವ್ಯಕ್ತಿಗಳ ಚಿತ್ರದಲ್ಲೂ ಕೆಲವು ವ್ಯತ್ಯಾಸಗಳನ್ನೂ ಕಾಣುತ್ತೇವೆ. ಕುಂಬಕರ್ಣನನ್ನು ಬೋಳನಂತೆ ಕುಸ್ತಿಪಟುವಿನಂತೆ ಚಿತ್ರಿಸಿದ್ದಾರೆ. ಕೆಲವು ಚಿತ್ರಗಳು ದೊಡ್ಡಪ್ರಮಾಣದಲ್ಲಿ ಕಂಡೂ ಪ್ರಮಾಣಬದ್ಧವಾಗಿಲ್ಲದಿರುವುದು. ಒಟ್ಟಾರೆಯಾಗಿ ಒಂದು ಭಿತ್ತಿ ಚಿತ್ರದ ಹಿನ್ನೆಲೆಯಲ್ಲಿ ನೋಡುವುದಾದರೆ ಕಲಾವಿದನು ಒಂದಿಷ್ಟು ಪ್ರಾಮಾಣಿಕ ಪ್ರಯತ್ನ ಮತ್ತು ನೈಜ ಹಾಗೂ ಸನ್ನಿವೇಷಗಳನ್ನು ನೋಡುಗನಿಗೆ ಅರ್ಥವಾಗುವ ರೀತಿಯಲ್ಲಿ ಮತ್ತು ಬಣ್ಣಗಳನ್ನು ಸ್ವತಃ ತಾವೇ ತಯಾರಿಸಿಕೊಂಡು, ಚಿತ್ರಿಸಿರುವುದು ಕಂಡು ಬರುತ್ತದೆ. ಭಿತ್ತಿ ಚಿತ್ರದ ವಿದಿವಿಧಾನವು ತಿಳಿದವನಾಗಿದ್ದಾನೆ. ಆದರೆ ಆಗ ಶಾಸ್ತ್ರಗಳನ್ನು ಕೈಬಿಟ್ಟಿದ್ದಾನೆ ಎನ್ನುವುದನ್ನು ಸ್ಪಷ್ಟವಾಗಿ ತಿಳಿಯುತ್ತದೆ.

ಈ ಕಲಾವಿದನು ಬರಿ ಚಿತ್ರವಷ್ಟೇ ಅಲ್ಲದೆ ದೇವತಾ ಮೂರ್ತಿಗಳನ್ನು ಮಾಡುತ್ತಿದ್ದರು ಎಂಬುದು ಗ್ರಾಮಸ್ಥರಿಂದ ತಿಳಿದುಬರುತ್ತದೆ. ಚನ್ನಕೇಶವ ದೇವಾಲಯದ ಒಂದು ಭಾಗದಲ್ಲಿ ಮೈಸೂರು ಒಡೆಯರ ಆಸ್ಥಾನದ ದೃಶ್ಯವಿದೆ. ರಾಜನ ಮುಂದ ಒಂದು ಪುಸ್ತಕವನ್ನು ತೋರಿಸಿ ಒಪ್ಪಿಗೆ ಪಡೆಯುತ್ತಿರುವ ದೃಶ್ಯವೂ ಚಿತ್ರಿಸಲಾಗಿದೆ. ಈ ಚಿತ್ರವು ಕಲಾವಿದನ ಪರಿಚಯ ಒಡೆಯರಿಗಿದೆ ಎನ್ನುವುದು ಹಾಗೂ ಅವರಿಂದ ಪ್ರೋತ್ಸಾಹ ಪಡೆದಿದ್ದರು ಎನ್ನುವುದು ತಿಳಿದು ಬರುತ್ತದೆ.

ಇತ್ತೀಚಿಗೆ ದೇವಾಲವು ಶಿಥಿಲಗೊಂಡಿದ್ದು ಅಲ್ಲಿನ ಚಿತ್ರಗಳು ಸುಮಾರು ಅರ್ಧದಷ್ಟು ಹಾಳಾಗಿವೆ. ಅವು ಕೇವಲ ಕೆಲವು ಕುರುಗಳು ಮಾತ್ರ ಉಳಿದಿವೆ. ಇನ್ನೇನು ಕೆಲವೇ ದಿನಗಳಲ್ಲಿ ಈಗಿರುವ ಚಿತ್ರಗಳು ಸಂಪೂರ್ಣವಾಗಿ ನಾಷವಾಗುತ್ತವೆ ಎನ್ನುವುದಕ್ಕೆ ಯಾವುದೇ ಸಂದೇಶವಿಲ್ಲ. ಬೆನಕನಕೆರೆ ನಾಗರೀಕರು ಹಿಂದಿನಿಂದಲೂ ಮೈಸೂರು ಸಾಂಪ್ರದಾಯಿಕ ಚಿತ್ರಗಳು, ತಂಜಾವೂರ ಶೈಲಿಯ ಚಿತ್ರಗಳು ಗ್ಲಾಸ್ ಪೈಂಟಿಗ್‌ಗಳಾದ ಲಕ್ಷ್ಮೀ, ಸರಸ್ವತಿ, ಆಂಜನೇಯ ಶ್ರೀರಾಮ ಪಟ್ಟಾಭಿಷೇಕ,ಮುಂತಾದ ಚಿತ್ರಗಳನ್ನು ಕಾಣುತ್ತೇವೆ. ಚೆನ್ನಕೇಶವ ದೇವಾಲಯವು ಚಿತ್ರಗಳಿಂದ ಕೂಡಿತ್ತು. ಆದರೆ ಪ್ರಕೃತಿ ವಿಕೋಪಕ್ಕೆ ಸಿಲುಕಿ ದೇವಾಲಯವು ಹಾಳಾಗುತ್ತಿದೆ. ಆದ ಕಾರಣ ಇಲ್ಲಿರುವ ಚಿತ್ರಗಳ ಮರು ಕೃತಿಯನ್ನು ಅದೇ ಗ್ರಾಮದ ಗ್ರಾಮದೇವತೆಯ ದೇವಾಲಯದಲ್ಲಿ ಅಲ್ಲಿಯ ಕಲಾವಿದನೊಬ್ಬನ ಹತ್ತಿರ ಬರೆಸಿರುವುದು ಗಮನಕ್ಕೆ ಬರುತ್ತದೆ. ಆ ಗ್ರಾಮ ಕಲೆಗೆ ಎಷ್ಟು ಒತ್ತು ನೀಡಿದೆ ಎನ್ನುವುದ ಸ್ಪಷ್ಟಪಡಿಸುತ್ತ ಚನ್ನಕೇಸವ

ದೇವಾಲಯದ ಚಿತ್ರಗಳ ನೆನಪಿಗೆ ಅದೇ ವಿಷಯಗಳನ್ನು ಕುರಿತು ಚಿತ್ರಿಸಿರುವುದು ಚಿತ್ರ ಕಲೆಗೆ ಹೆಮ್ಮೆಯ ವಿಷಯ.

### ಅಮೃತೂರು

ಕುಣಿಗಲ್ ತಾಲ್ಲೂಕಿನ ಒಂದು ಹೋಬಳಿಯಾಗಿರುವ ಅಮೃತೂರು ತಾಲ್ಲೂಕು ಕೇಂದ್ರದಿಂದ ಸುಮಾರು ಇಪ್ಪತ್ತು ಕಿ.ಮೀ ದೂರದ ಸುತ್ತಲಿನ ಹಳ್ಳಿಗಳಿಗೆ ಕೇಂದ್ರ ಸ್ಥಳವಾಗಿದೆ. ಅಮೃತೂರು ಹಿಂದೊಮ್ಮೆ ರಾಜಾಡಳಿತದ ಅವಧಿಯಲ್ಲಿ ಕೇಂದ್ರಾಡಳಿತವಾಗಿತ್ತು. ಪ್ರಾಚೀನ ಯುಗದಿಂದ ರಾಜಾಡಳಿತ ಕಾಲದವರೆಗೆ ಜಿಲ್ಲೆಯ ಮುಖ್ಯ ಕೇಂದ್ರ ಸ್ಥಳವಾಗಿ ಬೆಳೆದು ಬಂದಿದೆ. ಹಲವಾರು ಶಾಸನಗಳು ಇಲ್ಲಿವೆ.

ಅಮೃತೂರು ಒಂದೂವರೆ ಕಿ.ಮೀ ದೂರದಲ್ಲಿರುವ ಹೊಸಹಳ್ಳಿ ಎಂಬ ಪುಟ್ಟ ಗ್ರಾಮದಲ್ಲಿ ಪಟ್ಟಲದಮ್ಮ ಮತ್ತು ಲಕ್ಷ್ಮೀದೇವಿಯರ ದೇವಾಲಯವಿದೆ. ಈ ದೇವಾಲಯ ಹೊರನೋಟಕ್ಕೆ ತುಂಬ ಸರಳ ಸಾಧಾರಣ ದೇವಾಲವೆನಿಸಿದರೂ ಅದು ೧೯ನೇ ಶತಮಾನ ಅಂತ್ಯ ಕಾಲದ ಭಿತ್ತಿ ಚಿತ್ರಗಳನ್ನು ತನ್ನೊಳಗೆ ಅಡಗಿಸಿಕೊಂಡಿದೆ. ದೇವಾಲಯವು ಪಡಸಾಲೆ ವಿಷಾಲವಾದ ಗರ್ಭಗುಡಿಯ ಗೋಡೆ ಮತ್ತು ದ್ವಾರದ ಎದುರ ತೊಲೆಯ ಮೇಲೆ ಚಿತ್ರಗಳಿದ್ದು ಈಗ ಅವುಗಳು ಸಣ್ಣ ಬಣ್ಣಗಳಿಂದ ಮುಚ್ಚಿಹೋಗಿವೆ. ಉತ್ತಮ ರೇಖೆ, ಬಣ್ಣ, ಹಾಗೂ ಸಂಯೋಜನೆಯಿಂದ ಕೂಡಿದ ಶಿವಲೀಲಾಪ್ರಸಂಗ, ದಶಾವತಾರಗಳು, ಸ್ತ್ರೀ ಪುರುಷರ ಮೆರವಣಿಗೆ, ನೃತ್ಯಗಾರ್ತಿಯರು, ವಾದ್ಯಗಾರರು, ಕುದುರೆ ಸವಾರರು ವಿಶೇಷವಾಗಿ ಸುಮಾರು ೩x೫ ಅಳತೆಯ ಗೋಡೆಯ ಮೇಲೆ ರಚಿಸಲಾಗಿದೆ. ಅದೇ ಅಳತೆಯ ಮತ್ತೊಂದು ಬದಿಯಲ್ಲಿ ಚಿತ್ರವಿರುವ ಕುರುಹುವಿದೆ. ಆದರೆ ಸ್ಪಷ್ಟವಾಗಿ ತಿಳಿಯುವುದಿಲ್ಲ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪುರೋಹಿತರ ಸಹಾಯದಿಂದ ಸುಣ್ಣ ಬಣ್ಣಗಳಿಂದ ಮುಚ್ಚಿಹೋಗಿದ್ದ ಚಿತ್ರಗಳನ್ನು ತೆಗೆಯಲು ಪ್ರಯತ್ನಿಸಲಾಗಿ ಚಿತ್ರವಿರುವ ಕುರುಹು ಸಿಗುತ್ತದೆ. ಆದರೆ ಚಿತ್ರಗಳನ್ನು ಸುಣ್ಣ ಬಣ್ಣಗಳು ಅವುಗಳ ಆಯಸ್ಸನ್ನ ಹಾಳುಮಾಡಿವೆ. ಅದರಲ್ಲೂ ಅಲ್ಪಸ್ವಲ್ಪ ತಿಳಿಯಿತು. ಅವುಗಳ ಆಧಾರದ ಮೇಲೆ ಅವುಗಳು ಉತ್ತಮ ರೇಖೆ, ಬಣ್ಣ ಹಾಗೂ ಸಂಯೋಜನೆಯಿಂದ ಕೂಡಿದ್ದವು ಎಂದು ಹೇಳಲಾಗುತ್ತದೆ. ಭಿತ್ತಿ ಚಿತ್ರಗಳು ರಚನೆಗೊಂಡ ಕಾಲಾನಂತರ ಅವುಗಳ ಮೇಲೆ ಆಯಿಲ್ ಪೈಂಟ್ ಮರು ಲೇಪನ ಮಾಡಲಾಗಿದೆ. ಆದುದರಿಂದ ಚಿತ್ರಗಳು ನೈಜ ಸ್ಥಿತಿಯನ್ನು ಕಳೆದುಕೊಂಡಿವೆ. ಅಲ್ಲದೆ ಪ್ರತೀ ವರ್ಷವೂ ಲೇಪಿತವಾದ ಸುಣ್ಣ ಬಣ್ಣಗಳು ಭಿತ್ತಿ ಚಿತ್ರಗಳ ಅವನತಿಗೆ ಕಾರಣವಾಗಿವೆ. ದೇವಾಲಯದ ನಿರ್ವಾಹಕರು ಚಿತ್ರಗಳ ಮಹತ್ವ ಅರಿಯದೇ ಹೋಗಿರುವುದು ಸ್ಥಿತಿಗೆ ಕಾರಣವಾಗಿದೆ.

### ಯಡೆಯೂರು

ಕುಣಿಗಲ್ ತಾಲ್ಲೂಕಿನ ಯಡೆಯೂರು ಶ್ರೀ ಸಿದ್ಧಲಿಂಗ ಸ್ವಾಮಿ ಯತಿಗಳ ಪುಣ್ಯಕ್ಷೇತ್ರ. ಈ ದೇವಾಲಯದ ಮುಖ್ಯ ಮಂಟಪದ ಚಾವಣಿಯಲ್ಲಿ ನೂರಾರು ಚಿತ್ರಗಳು ಇದ್ದವು. ಅಲ್ಲಿ ಶ್ರೀ ಸಿದ್ಧಲಿಂಗಯತಿಗಳಿಗೆ ಸಂಬಂಧಿಸಿದ ಅವರ ಪವಾಡಗಳನ್ನು ಕುರಿತಾದ ಸಚಿತ್ರಗಳು ಚಿತ್ರಿತವಾಗಿದ್ದವು.

ನಂತರ ಅವುಗಳನ್ನು ಮರು ಬಣ್ಣ ಲೇಪನ ಮಾಡಿದ್ದರು. ಆನಂತರ ಚಿತ್ರಗಳು ಸುಮಾರು ದಿನಗಳ ತರುವಾಯ ಕಾಣದಂತಾಗಿವೆ. ಈ ದೇವಾಲಯದಲ್ಲಿ ಚಿತ್ರಗಳಿದ್ದುದರ ಬಗ್ಗೆ ೧೯೩೦ನೇ ಗ್ಯಾಸೆಟಿಯರ್‌ನಲ್ಲಿ ವಿವರಣೆ ಪ್ರಸ್ತುತ ಮುಖ್ಯ ದ್ವಾರದ ಮೇಲೆ ಶ್ರೀ ಸಿದ್ಧಲಿಂಗಯತಿಗಳು ಸುಖಾಸನದಲ್ಲಿ ಮಲಗಿರುವ ಚಿತ್ರವಿದೆ. ಅಕ್ಕ ಪಕ್ಕದಲ್ಲಿ ನಾಟಕದ ಪರದೆಯೊಪಾದಿ ಇರುವ ಎರಡೂ ಬದಿಯಲ್ಲಿ ರಚಿಸಲಾಗಿದೆ. ಇದೇ ಮಾದರಿಯ ಹಲವಾರು ಚಿತ್ರಗಳು ಛಾವಣಿತಲುಪಿಲ್ಲ. ಇದ್ದವು ದೇವಾಲಯದ ಜೀರ್ಣೋದ್ಧಾರದ ಸಂದರ್ಭದಲ್ಲಿ ಅವುಗಳನ್ನು ಕೆರೆದುಹಾಕಲಾಯಿತು ಎಂದು ದೇವಾಲಯದ ಮುಖ್ಯಸ್ಥರು ಪುರೋಹಿತರು ಹೇಳುತ್ತಾರೆ. ದೇವಾಲಯದ ಮಿಠಾಯಿ ಮನೆಯಲ್ಲಿ ಸಿದ್ಧಲಿಂಗ ಯತಿಗಳು ತಪಸ್ಸಿನಲ್ಲಿದ್ದರು. ಹಿಂದೆ ಹುತ್ತ ಹುತ್ತದ ಕೋವಿನಗಳಲ್ಲಿ ಹಾವುಗಳು, ಹಾಗೂ ಕಾಮಧೇನು ಹಾಲು ಕರೆಯುತ್ತಿರುವ ಚಿತ್ತವಿದೆ. ಯತಿಗಳ ದರುಶನಕ್ಕೆ ಕಾದುನಿಂತಿರುವ ರಾಜಪೋಷಾಕಿನ ಸ್ತ್ರೀ ಪುರುಷರು ಆಶೀರ್ವಾದಕ್ಕಾಗಿ ಕಾದು ನಿಂತಿದ್ದಾರೆ ಎಂದು ತೋರುತ್ತ ಪುರುಷನು ತಲೆಗೆ ರುಮಾಲು ಕಟ್ಟಿ ಉದ್ದನೆಯ ಪೀತಾಂಬರದ ಅಂಗಿ ಕಚ್ಚೆ ಕಟ್ಟಿದ್ದಾನೆ. ಸ್ತ್ರೀಯು ಮರಾಠಿಮಾದರಿಯ ಸೀರೆಯನ್ನುಟ್ಟು ರವಿಕೆ ಮತ್ತು ಸೀರೆಯ ತುಂಬೆಲ್ಲ ಚಿನ್ನದ ಲೇಪನವನ್ನು ಚಿತ್ತಾರದಲ್ಲಿ ಮಾಡಲಾಗಿದೆ. ಈ ಶೈಲಿಯು ಮೈಸೂರು ಸಾಂಪ್ರದಾಯಿಕ ಶೈಲಿ ಎಂದು ಸ್ಪಷ್ಟಪಡಿಸುತ್ತಾರೆ. ಏಕೆಂದರೆ ತೆಳುವಾದ ಚಿನ್ನದ ಹಾಳೆಯನ್ನು ಬಳಸಿ ಚಿತ್ರ ರಚಿಸುವುದು ಮೈಸೂರು ಸಂಪ್ರದಾಯಿಕ ಶೈಲಿಯಲ್ಲಿ ಮಾತ್ರ ಕಾಣುತ್ತೇವೆ. ಈ ಚಿತ್ರವು ಪೇಪರ್ ಮಾಧ್ಯಮದ ಮೇಲೆ ಜೆಸೊ ಮತ್ತು ಚಿನ್ನದ ಹಾಳೆ ಬಳಸಿದ ಚಿತ್ರವಾಗಿದೆ. ಈ ಚಿತ್ರವು ೨x೪ ಅಡಿ ಅಳತೆಯಿಂದ ಕೂಡಿದ್ದು ತುಮಕೂರಿನ ಕ್ಯಾಸ್ತಂದ್ರದ ಶ್ರೀ ಎಂ.ಆರ್.ವೀರಪ್ಪಾಜಿ ಮತ್ತು ಶ್ರೀಮತಿ ಎನ್.ಆರ್.ಸುಮಂಗಳ ರವರ ಕುಟುಂಬ, ಎಸ್.ವಿ.ಬಿ.ಎಸ್.ಕೊಡುಗೆ ಎಂದು ಬರೆಯಲಾಗಿದೆ. ಈ ಚಿತ್ರದ ಕೊಡುಗೆಯನ್ನು ಗಮನಿಸಿದರೆ ಹಿಂದೆ ಈ ದೇವಾಲಯದಲ್ಲಿ ಉತ್ತಮ ಭಿತ್ತಿ ಚಿತ್ರಿಗಳಿದ್ದವೆಂದು ಗೋಚರಿಸುತ್ತವೆ. ಇಲ್ಲಿದ್ದ ಚಿತ್ರಗಳೇ ಈ ಕಲಾಕೃತಿಯ ಕೊಡುಗೆಗೆ ಪ್ರೇರಣೆ ನೀಡಿರಬೇಕು ಎನಿಸುತ್ತದೆ.

ಯಡೆಯೂರಿನಲ್ಲಿ ಚಿತ್ರಮಠವೆಂದು ಇತ್ತು. ಅಲ್ಲಿ ಚಿತ್ರ ಶಾಲೆಯು ನಡೆಯುತ್ತಿತ್ತು. ಇಲ್ಲಿ ಹಲವಾರು ಚಿತ್ರಕಲಾವಿದರು ಇದ್ದರು. ಮಾರ್ಕೋನಹಳ್ಳಿ ಡ್ಯಾಮ್‌ನ ಹಿನ್ನೀರಿನಿಂದ ಇಡೀ ಚಿತ್ರಮಠವು ನೀರಿನಲ್ಲಿ ಮುಳುಗಿ ಅಲ್ಲಿದ್ದವುಗಳೆಲ್ಲ ನೀರಿನ ಪಾಲಾಗಿ ಯಾವುದೇ ಕುರುಗಳು ಇಲ್ಲದವಾಗಿವೆ ಎಂದು ಡಾ.ಬಿ.ನಂಜುಂಡಸ್ವಾಮಿಯವರ ಸಂದರ್ಶನದಲ್ಲಿ ತಿಳಿಸಿದ್ದಾರೆ. ಈ ಎಲ್ಲಾ ಮಾಹಿತಿಯಿಂದ ಯಡೆಯೂರು ಸಿದ್ಧಲಿಂಗೇಶ್ವರ ದೇವಾಲಯದಲ್ಲಿ ಉತ್ತಮ ಚಿತ್ರವಿದ್ದಿರಬೇಕು ಎಂಬುದು ಮೇಲಿನ ಹೇಳಿಕೆಗಳಿಂದ ಖಚಿತವಾಗುತ್ತದೆ.

## ಮಿಂಚುಕಲ್ಲು ಗೊಲ್ಲಹಳ್ಳಿ

ತುಮಕೂರಿನಿಂದ ಮಧುಗಿರಿಗೆ ಹೋಗುವ ಮಾರ್ಗದಲ್ಲಿ ರಸ್ತೆ ಬದಿಯಲ್ಲೇ ಇರುವ ಮಿಂಚುಕಲ್ಲುಗೊಲ್ಲಳ್ಳಿಯ ಆಂಜನೇಯ ದೇವಾಲಯದಲ್ಲಿ ಭಿತ್ತಿ ಚಿತ್ರಗಳು ಇದ್ದವು. ಆದರೆ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಅವುಗಳ ಯಾವುದೇ ಸುಳಿವು ಕಾಣಲಿಲ್ಲ. ದೇವಾಲಯದ ಮುಖ್ಯಸ್ಥರನ್ನು

ಕೇಳಿದಾಗ, ಮೊದಲು ಇದ್ದವು. ಅವುಗಳ ಮೇಲೆ ಸುಣ್ಣ ಹೊಡೆಯಲಾಗಿದೆ. ಆದರೆ ಈಗ ಅವು ಹಾಳಾಗಿ ಹೋಗಿವೆ ಎಂಬುದು ಅವರ ಹೇಳಿಕೆಯಾಗಿತ್ತು. ೧೯೮೭ರಲ್ಲಿ ಡಾ.ಅ.ಲ.ನರಸಿಂಹನ್‌ರವರು ಈ ದೇವಾಲಯಕ್ಕೆ ಭೇಟಿಕೊಟ್ಟಾಗ ಚಿತ್ರಗಳ ಮೇಲೆ ಸುಣ್ಣ ಹೊಡೆದಿದ್ದು ಅದನ್ನು ನೀರಿನಿಂದ ತೊಳೆದು ಚಿತ್ರಕಾಣುವಂತೆ ಮಾಡಿದ್ದರು. ಸುಮಾರು ಮೂರು ಅಡಿ ಉದ್ದ ಮತ್ತು ಎರಡು ಅಡಿ ಅಗಲದ ಭಾಗದಲ್ಲಿ ದಶಾವತಾರಗಳಿಗೆ ಸಂಬಂಧಿಸಿದ ಕೆಲವು ಚಿತ್ರಗಳಿದ್ದವು. ಅವುಗಳಲ್ಲಿ ಬುದ್ಧನ ಚಿತ್ರವಿರುವುದು ವಿಶೇಷ ಹಾಗೂ ರಾಮಾಯಣ ಮಹಾಭಾರತ ಚಿತ್ರಗಳ ಕೆಲವು ದೃಶ್ಯಗಳು ಇದ್ದವು ಎಂದು ಎಸ್.ವೆಂಕಟೇಶ್ ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ.

ಶ್ರೀರಾಮ ಪಟ್ಟಾಭಿಷೇಕ ಚಿತ್ರವು ಮೈಸೂರು ಶೈಲಿಯ ಗೋಲ್ಡ್ ಲೀಫ್ ಲೇಪಿತ ಅತ್ಯುತ್ತಮ ಕಲಾಕೃತಿಯು ಇದೇ ದೇವಾಲಯದ ಅರ್ಚಕರ ಬಳಿ ಸಂಗ್ರವಿತ್ತು. ಕೆಲವು ದಿನಗಳ ಹಿಂದೆ ಕಲಾವಿದ ವಿಜಯಹಾಗರಗುಂಡಿಗೆ ಅವರು ಅದನ್ನು ತಮ್ಮ ಸಂಗ್ರಹಾಲಯದಲ್ಲಿರಿಸಿದರು. ಇಂತಹ ಹಲವಾರು ಕಲಾಕೃತಿಗಳು ಈ ಸ್ಥಳದಲ್ಲಿ ಇದ್ದು ಕಲಾಕೃತಿಯ ಮಹತ್ವ ತಿಳಿಯದೆ ಅಷ್ಟೋ ಇಷ್ಟೋ ಹಣಕ್ಕೆ ಮಾರಿಕೊಂಡಿರುವುದು ತಿಳಿದು ಬಂದಿದೆ. ಪ್ರಸ್ತುತ ದಿನಗಳಲ್ಲಿ ಆಂಜನೇಯ ದೇವಾಲಯವನ್ನು ಸುಣ್ಣಬಳಿದು ಸ್ವಚ್ಛಗೊಳಿಸಿದ್ದಾರೆ.

### ಹೆಬ್ಬೂರು

ತುಮಕೂರು ಮತ್ತು ಕುಣಿಗಲ್ ಮಾರ್ಗ ಮಧ್ಯದಲ್ಲಿರುವ ಹೋಬಳಿ ಕೇಂದ್ರ ಹೆಬ್ಬೂರು. ಈ ಊರನ್ನು ವಿಶೇಷವಾಗಿ ಗಮನಿಸುವ ಹಲವಾರು ಕುಲೊಹಲಕಾರ ಅಂಶಗಳು ಬೆರಗು ಮಾಡುತ್ತದೆ. ಈ ಪುಟ್ಟ ಊರು ೧೦೧ ದೇವಾಲಯಗಳನ್ನು ಹೊಂದಿದ್ದು ಎಲ್ಲ ದೇವರಿಗೂ ಒಂದೊಂದು ದೇವಾಲಯವು ಈ ಸ್ಥಳದ ವಿಶೇಷವಾಗಿದೆ. ಈ ದೇವಾಲಯಗಳು ಪುರಾತನ ಇತಿಹಾಸವನ್ನು ಹೊಂದಿದ್ದು ಶೈವ, ವೈಷ್ಣವ, ಜೈನ, ಇಸ್ಲಾಂ ಮತ್ತು ಗ್ರಾಮದೇವತೆಗಳ ದೇವಾಲಯಗಳು ಇಲ್ಲಿವೆ. ಗಂಗಕಾಲದಿಂದ ವಿಜಯನಗರ ಕಾಲದವರೆಗಿನ ದೇವಾಲಯಗಳನ್ನು ಈ ಊರು ಹೊಂದಿದೆ.

ಪುಟ್ಟದೊಂದು ಚನ್ನಕೇಶವ ದೇವಾಲಯದಲ್ಲಿ ಭಿತ್ತಿ ಚಿತ್ರಗಳಿದ್ದು ರಾಮ, ದ್ವಾರಪಾಲಕರು, ಗಣಪತಿ, ಶಣ್ಮುಖ, ವಿಷ್ಣುವಿರುವ ಚಿತ್ರಗಳು ಅಲ್ಪಸ್ವಲ್ಪ ಕಂಡು ಬರುತ್ತವೆ, ದೇವಾಲಯವು ಮಂಟಪ, ಸುಖನಾಸಿ, ಹಾಗೂ ಗರ್ಭಗುಡಿಯನ್ನು ಹೊಂದಿದೆ. ಸುಖನಾಸಿಯ ಗೋಡೆಯ ಮೇಲೆ, ೨x೩ ಅಡಿ ಅಳತೆಯ ರಾಮನ ಚಿತ್ರವಿದ್ದು ಉತ್ತಮ ರೇಖಾವಿನ್ಯಾಸದಿಂದ ಕೂಡಿದೆ. ಗರ್ಭಗುಡಿಯ ಬಾಗಿಲ ಮೇಲೆ ಜಯ ವಿಜಯರ ಚಿತ್ರವಿದ್ದು ಹೂಬಳ್ಳಿ ನಕ್ಷೆಯೊಂದಿಗೆ ಮುಂದುವರೆಯುತ್ತದೆ. ಬಾಗಿಲ ತಲೆಯ ಮೇಲೆ ಗಣಪತಿ, ವಿಷ್ಣು ಮತ್ತು ಲಕ್ಷ್ಮಿ ಚಿತ್ರವಿದ್ದು ಎರಡೂ ಬದಿಯಲ್ಲಿ ಶಂಕ ಚಕ್ರಗಳಿಂದ ಕೂಡಿದೆ. ಈ ಚಿತ್ರಗಳು ಪ್ರಸ್ತುತ ದಿನದಲ್ಲಿ ತೊಂಬತ್ತು ಭಾಗದಷ್ಟು ಹಾಳಾಗಿದ್ದು ಅಲ್ಲಲ್ಲೇ ರೇಖೆಗಳು ಕಾಣುತ್ತದೆ. ಉತ್ತಮವಾದ ರೇಖೆ ಸಂಯೋಜನೆಯಿಂದ ಕೂಡಿದ ನುರಿತ ಕಲಾವಿದರಿಂದ ರಚನೆಗೊಂಡ ಚಿತ್ರಗಳಾಗಿವೆ. ಆದರೆ ಊರಿನ ಜನರ ನಿರ್ಲಕ್ಷ್ಯದಿಂದ ದೇವಾಲಯವು ಅವಸಾನದ ಅಂಚಿನಲ್ಲಿದೆ. ಈಗ ದೇವಾಲಯದ

ಸುಮಾರು ಮೂರು ಅಡಿ ಎತ್ತರದ ಸುಂದರ ವೇಣುಗೋಪಾಲನ ಕಪ್ಪುಶಿಲೆ ವಿಗ್ರಹವು ಅತ್ಯುತ್ತಮ ಕಲಾವಿದನಿಂದ ರಚನೆಗೊಂಡಿದೆ. ಅದೇ ರೀತಿ ಭಿತ್ತಿ ಚಿತ್ರಗಳು ಉತ್ತಮವಾದ ಚಿತ್ರಗಳಾಗಿವೆ. ಇವುಗಳ ಕಾಲಮಾನವು ತಿಳಿದು ಬಂದಿಲ್ಲ ಸರಿಸುಮಾರು ೧೯ನೇ ಶತಮಾನದಲ್ಲಿ ರಚನೆಗೊಂಡಿರಬೇಕು ಎಂಬುದು ಊಹೆಗೆ ಹತ್ತಿರವಾಗಿದೆ. ಪ್ರಸ್ತುತ ಈ ದೇವಾಲಯವು ದನ, ಕರು, ನಾಯಿ, ನರಿಗಳ ಗೂಡಾಗಿದೆ.

ಇಷ್ಟೇ ಅಲ್ಲದೆ ಗುಬ್ಬಿಯ ತೋರೆಮಠ, ಚಿಕ್ಕನಾಯಕನಹಳ್ಳಿಯ ಯಳನಡು ಮತ್ತು ಹಾಗಲವಾಡಿ ಗುಬ್ಬಿಯ ತುಳಸಿಕಟ್ಟೆ, ಸಿರಾದ ಮರಡಿ ರಂಗನಾಥ ದೇವಾಲಯ ಮಧುಗಿರಿಯ ತುಂಗಡಿಯ ದೇವಾಲಯಗಳಲ್ಲಿಯೂ ಹಳೆಯ ಭಿತ್ತಿ ಚಿತ್ರಗಳಿದ್ದವು. (ಕಲ್ಪಸಿರಿ, ಸ್ಮರಣ ಸಂಚಿಕೆ, ಲೇ: ಎಸ್.ವೆಂಕಟೇಶ್, (ಸಂ) ನಂಜುಂಡ ಸ್ವಾಮಿ, ಪ್ರಸಾರಾಂಗ, ಕನ್ನಡ ಸಾಹಿತ್ಯ ಪರಿಷತ್ತ್, ಬೆಂಗಳೂರು, ೨೦೦೨) ಹಾಗೂ ಗುಬ್ಬಿ ನಗರದ ಹಲವಾರು ಮನೆಗಳಲ್ಲಿ ಕೊರಟಗೆರೆ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ತುಮಕೂರು ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಈಗಲೂ ಪೂಜೆ ಸಲ್ಲಿಸಿಕೊಳ್ಳುತ್ತಿರುವ ಕಂಡು ಬರುತ್ತದೆ. ಮೈಸೂರು ಶೈಲಿಯ, ತಂಜಾವೂರು ಶೈಲಿಯ ಅನೇಕ ಕಲಾಕೃತಿಗಳನ್ನು ಸಂಗ್ರಹಿಸಲಾಗಿದೆ. ವಿಶೇಷವಾಗಿ ತುಮಕೂರು ತಾಲ್ಲೂಕಿನ ಉಡುಗೆರೆ ಬಳಿಯ ಹಿರೇಗುಂಡನಳ್ಳಿಯ ಒಂದು ಮನೆಯಲ್ಲಿ ನಾರಿಮುಡಿಯುಟ್ಟ ರಾಮ, ಲಕ್ಷ್ಮಣ, ಸೀತೆ ಮತ್ತು ಆಂಜನೇಯ ಸಮೇತರಾದ ಸುಮಾರು ೨೧೨೪ ಅಡಿ ಅಳತೆಯ ಪೇಪರ್ ಮಾಧ್ಯಮದಲ್ಲಿ ಮಾಡಿದ ಮೈಸೂರು ಸಾಂಪ್ರದಾಯಿಕ ಶೈಲಿಯ ಚಿತ್ರವನ್ನು ಮೈಸೂರಿನ ಜನಮೋಹನ ಚಿತ್ರಶಾಲೆಯ ಕಲಾವಿದರಿಂದ ರಚಿಸಿಕೊಂಡು ಮೈಸೂರಿನಿಂದ ಹಿರೇಗುಂಡಗಲ್ಲಿಗೆ ಮೆರವಣಿಗೆ ಮೂಲಕ ತಂದರಂತೆ. ಆ ಚಿತ್ರವು ಇಂದಿಗೂ ಸಚಿತ್ರವಾಗಿದೆ. ರಾಮ ಲಕ್ಷ್ಮಣ, ಸೀತೆ, ನಾರಿಮುಡಿಯುಟ್ಟು ಕೊರಳಲ್ಲಿ ರುದ್ರಾಕ್ಷಿ ಮಣಿ ಧರಿಸಿದ್ದಾರೆ. ಆಂಜನೇಯನು ರಾಮನಿಗೆ ವಿಧೇಯನಾಗಿ ಕೈ ಜೋಡಿಸಿ ಕುಳಿತಿದ್ದಾರೆ. ಎಲ್ಲರ ಮುಖದಲ್ಲಿ ಮಂದಹಾಸವು ಕಾಣುತ್ತಿದೆ. ಹಲವು ಬಗೆಯ ಲತೆಗಳೊಂದಿಗೆ, ಸುಂದರವಾದ ಪ್ರಕೃತಿಯೊಂದಿಗಿನ ಈ ಚಿತ್ರವು ನೋಡುಗನ ಗಮನ ಸೆಳೆಯುತ್ತದೆ. ಹೀಗೆ ಹಲವಾರು ಕಡೆ ಈ ರೀತಿಯ ವಿಷೇಶತೆಗಳಿಂದ ಕೂಡಿದ ಉದಾಹರಣೆಗಳು ದೊರೆಯುತ್ತದೆ. ಅದಕ್ಕೆ ಡಾ.ಅ.ಲ.ನರಸಿಂಹನ್ ರವರು ಮೈಸೂರನ್ನು ಹೊರತು ಪಡಿಸಿದರೆ ಕರ್ನಾಟಕದಲ್ಲಿ ಅತಿ ಹೆಚ್ಚು ಭಿತ್ತಿ ಚಿತ್ರಗಳನ್ನು ಹೊಂದಿದ ಜಿಲ್ಲೆ ತುಮಕೂರು ಎಂದು ಪ್ರಸ್ತಾಪಿಸುತ್ತಾರೆ. (ಹೊಂಬೆಳಕು ಸ್ಮರಣ ಸಂಚಿಕೆ, ಜನಕನ ಕೆರೆಯ ಜನಪದ ಭಿತ್ತಿ ಚಿತ್ರಗಳು, ಲೇಖಕರು: ಡಾ.ಅ.ಲ.ನರಸಿಂಹನ್, ಪು-೯, ೧೯೮೯) ಮೇಲೆ ತಿಳಿಸಿದ ಸ್ಥಳಗಳಲ್ಲಿ ಪ್ರಸ್ತುತ ಭಿತ್ತಿ ಚಿತ್ರಗಳ ಯಾವುದೇ ಕುರುಹು ಉಳಿದಿಲ್ಲ ಎನ್ನುವುದು ವಿಪರ್ಯಾಸ.

## ಅಡಿಟಿಪ್ಪಣಿ

೧. ಸಿ.ವೆಂಕಟೇಶ್, ಕಲ್ಪಸಿರಿ, ಪುಟ-೧೫೪

# ಶೈವಧರ್ಮದ ಹಿನ್ನೆಲೆಯ ಭಿತ್ತಿ ಚಿತ್ರಗಳು

ಧರ್ಮದ ಚೌಕಟ್ಟನ್ನು ಹಾಕಿಕೊಂಡಾಗ, ಧಾರ್ಮಿಕ ಆಚರಣೆಗಳು ಕಲೆಯ ರೂಪ ತಾಳುವುದನ್ನು ನೋಡುತ್ತೇವೆ. ಎಷ್ಟೋ ಸಲ ಹಿಂದಿನಿಂದ ಬಂದಿದೆ, ಅದನ್ನು ಬಿಡಬಾರದೆಂದು ಆಚರಿಸುವ ಅನೇಕ ಆಚರಣೆಗಳು ನಮ್ಮ ಕಣ್ಮುಂದಿವೆ. ಈ ಧರ್ಮದ ಸಂಪ್ರದಾಯಗಳ ಪ್ರಭಾವಕ್ಕೆ ಸಿಲುಕಿ ದೇವರ ಆರಾಧನೆಗೆ ತೊಡಗಿ ದೇವರನ್ನು ಸ್ತುತಿಸಲು ನಲಿಸಲು ದೇವರ ಕಣ್ಣಿಗೆ ಹಬ್ಬ ಮಾಡಲು ಸಾಹಿತ್ಯ ನೃತ್ಯ, ಅಲಂಕಾರದಂತಹ ಕಲೆಗಳು ಹುಟ್ಟಿ ಬಂದವು, ಒಟ್ಟಾರೆಯಾಗಿ ಕಲೆಯ ಉಗಮವನ್ನು ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ದೈವದ ಆರಾಧನೆಯ ಹಿನ್ನೆಲೆಯಲ್ಲಿ ಪರಿಗಣಿಸಬೇಕಾಗುತ್ತದೆ.[೧] ಪ್ರತಿಯೊಂದು ಆಚರಣೆಗೆ ಒಂದೊಂದು ಪ್ರತಿರೂಪವನ್ನು ಸೃಷ್ಟಿಸುವುದು ಜನಪದರ ವೈಶಿಷ್ಟ್ಯವಾಗಿದೆ. ಹಾಗೆಯೇ ಆಯಾಧರ್ಮದಲ್ಲಿ ವಿಶೇಷವಾದ ಮೂರ್ತಿ ಅಥವಾ ಚಿತ್ರಪಟಗಳನ್ನು ಪೂಜಿಸುವುದು ಆರಾಧನೆಯ ಸಂಕೇತವಾಗಿದೆ.

ಸ್ಪಷ್ಟವಾಗಿ ತಿಳಿದುಕೊಂಡು ಶ್ರದ್ಧೆಯಿಂದ ಆಚರಿಸಿದಾಗ ಜೀವಿಯಲ್ಲಿ ವಿಕಾಸ ಮತ್ತು ಪರಿವರ್ತನೆಯನ್ನು ಉಂಟು ಮಾಡುವ ಸತ್ಯಗಳ ಸಮೂಹವೇ ಧರ್ಮವೆಂದು ಸೈದ್ಧಾಂತಿಕವಾಗಿ ನಿರೂಪಿಸಬಹುದು. ನಮ್ಮ ಶೀಲ ಸ್ವಭಾವಗಳು ನಮ್ಮ ನಂಬಿಕೆಗೆ ಅನುಗುಣವಾಗಿ ರೂಪುಗೊಳ್ಳುತ್ತವೆ. ಇದೇ ಧರ್ಮದ ಮೂಲದ ಸತ್ಯ ನಮ್ಮ ಅಂತರಂಗವನ್ನು ಶುದ್ಧೀಕರಿಸುವ ಶ್ರದ್ಧೆ ಶಕ್ತಿಯೇ ಧರ್ಮ, ಈ ಕಾರಣದಿಂದ ಶ್ರದ್ಧೆಯು ಧರ್ಮದ ಮೂಲ ಸತ್ಯವಾಗಿದೆ. ಈ ನೆಲೆಗಟ್ಟಿನಲ್ಲಿ ಭಾರತೀಯ ಮನೋ ಭೂಮಿಕೆಯಲ್ಲಿ ಧರ್ಮಗಳು ಸ್ಥಾನಪಡೆದಿದೆ. ಆಚರಣೆಯಲ್ಲಿ ಹಾಸುಹೊಕ್ಕಾಗಿ ಬದುಕಿನ ಅವಿಭಾಜ್ಯ ಅಂಗಗಳಾಗಿವೆ. ಇದಕ್ಕೆ ಪ್ರತೀಕವಾಗಿ ಅನೇಕ ಧರ್ಮಗಳು ಉದಯಿಸಿವೆ. ಪ್ರಧಾನವಾಗಿ ನಾಗರೀಕತೆಯ ಕಾಲದಿಂದಲೂ ಇಲ್ಲಿ ಶೈವ, ವೈಷ್ಣವ, ಬೌದ್ಧ, ಜೈನ, ಇನ್ನಿತರ ಧರ್ಮಗಳು ಅಸ್ಥಿತ್ವದಲ್ಲಿದ್ದು ಕಲೆ ಮತ್ತಿತರ ಸಂಗತಿಗಳಲ್ಲಿ ತಮ್ಮ ಅಸ್ಥಿತ್ವವನ್ನು ಸಾಬೀತು ಪಡಿಸಿವೆ.[೨] ಕಲೆಯ ಒಂದು ಪ್ರಕಾರವೇ ಆಗಿರುವ ಭಿತ್ತಿ ಚಿತ್ರಕಲೆಯಲ್ಲಿಯೂ ಮೇಲಿನ ಸಂಗತಿಗಳು ಪುರಾವೆಗಳಾಗಿ ಕಾಣಸಿಗುತ್ತವೆ.

ಶೈವ ಧರ್ಮವೂ ಅತೀ ಪ್ರಾಚೀನವಾದುದು. ಸಿಂಧೂ ನದಿ ತೀರದಲ್ಲಿ ಹೂತುಹೋಗಿದ್ದ ಮೆಹೆಂಜೋದಾರೊ, ಹರಪ್ಪ ಪಟ್ಟಣಗಳನ್ನು ಅಗೆದು ಪರಿಶೋಧನೆ ನಡೆಸಿದಾಗ ಸಿಕ್ಕಿದ ಅವಶೇಷಗಳಿಂದ ಐದು ಸಾವಿರ ವರ್ಷಗಳ ಹಿಂದೆಯೇ ಒಂದು ಉನ್ನತ ಸಂಸ್ಕೃತಿ ಇತ್ತೆಂದು ಇತಿಹಾಸ ಸಂಶೋಧಕರು ನಿರ್ಣಯಿಸುತ್ತಾರೆ. ಅಲ್ಲಿ ದೊರೆತ ಶಿವಲಿಂಗಗಳ ಆಧಾರದ ಮೇಲೆ ಶೈವ ಸಂಸ್ಕೃತಿಯು ಎಲ್ಲ ಮತಗಳಿಗಿಂತಲೂ ಪುರಾತನವಾದ್ದೆಂತಲೂ, ಅದು ಲೋಹ ಯುಗಕ್ಕೆ ಹಿಂದಿನಿಂದಲೂ ಇತ್ತೆಂತಲೂ ಅಭಿಪ್ರಾಯಪಡಲಾಗಿದೆ. ಅಲ್ಲದೆ ಈ ಸಂಸ್ಕೃತಿಯು ಆರ್ಯರು ಭರತಖಂಡಕ್ಕೆ ಬರುವ ಮೊದಲೇ ಬೆಳೆದಿತ್ತೆಂದು ಹೇಳಲಾಗಿದೆ. ಇದಕ್ಕೆ ಅನುಗುಣವಾಗಿ ಭಾರತದ ಉದ್ದಗಲಕ್ಕೂ ಶೈವಾಚರಣೆಯ ಕುರುಹುಗಳನ್ನು ಗುರುತಿಸಬಹುದಾಗಿದೆ. ಈ ಶೈವ ಧರ್ಮದಲ್ಲಿ ಅಡಗಿರುವ ಉದಾತ್ತ ತತ್ವಗಳು ಸಾಧನ ಮಾರ್ಗಗಳು ಸಾಹಿತ್ಯ ಕಲೆ ಮೊದಲಾದವುಗಳಿಂದ ಇದೊಂದು ಲೋಕ ಪ್ರಸಿದ್ಧವಾದ ಮತವೆನ್ನಬಹುದು ಇದಕ್ಕೆ ಪೂರಕವಾಗಿ ಅನೇಕ ಸುಂದರವಾದ ಶಿವಾಲಯಗಳು ಮಠ ಮಾನ್ಯಗಳು ನಿರ್ಮಿತವಾಗಿವೆ. ಇದಕ್ಕೆ ಅನುಗುಣವಾಗಿ ಶೈವಧರ್ಮದ ಇತಿಹಾಸ, ತತ್ವಜ್ಞಾನ, ಆಚಾರ ವಿಚಾರಗಳನ್ನು ಒಳಗೊಂಡ ವಿಪುಲ ಸಾಹಿತ್ಯ ಬೆಳೆದು ಬಂದಿದೆ.[೩] ಹೀಗೆ ರಚನೆಯಾದ ಸಾಹಿತ್ಯದಲ್ಲಿನ ತಾತ್ವಿಕ ವಿಚಾರಗಳು ಕಲೆಯಲ್ಲಿ ರೂಪು ಪಡೆದಿರುವುದನ್ನು ಚಿತ್ರಕಲೆ, ಶಿಲ್ಪಕಲೆ, ವಾಸ್ತು ಕಲೆಯಲ್ಲಿ ಗುರುತಿಸಬಹುದಾಗಿದೆ.

ಶೈವ ಮತೆಂಬುದು ಶಿವನ ಆರಾಧನೆಯ ಆಚರಣೆಯಾಗಿದೆ. ಶಿವನ ವಿವಿಧ ರೂಪಗಳನ್ನು ಕಲಾವಿದರು ತಮ್ಮ ಕಲೆಯಲ್ಲಿ ಮೂರ್ತಿಕರಿಸವುದುನ್ನು ಕಾಣಬಹುದು. ಅಂತಹ ಪ್ರಥಮ ಕುರುಹುಗಳನ್ನು ಅಜಂತಾದ ಭಿತ್ತಿ ಚಿತ್ರಗಳಲ್ಲಿ ಕಲಾ ಸಂಶೋಧಕರು ಗುರುತಿಸಿದ್ದಾರೆ. ಬಾದಾಮಿಯಲ್ಲಿ ವೈಷ್ಣವ ಪರವಾದ ಗುಹಾ ಚಿತ್ರಗಳು ದೊರೆತಂತೆ ದಕ್ಷಿಣ ಭಾರತದಲ್ಲಿ ಶೈವ ಪರವಾದ ಗುಹಾ ಚಿತ್ರಗಳು ದೊರೆಯುವುದಿಲ್ಲವೆಂದು ವಿದ್ವಾಂಸರ ಅಭಿಪ್ರಾಯ. ಮೊದಲಿನ ಗುಹಾಲಯದಲ್ಲಿ ದೇವರು ಇರಬಹುದಾದ ಸ್ಥಳದಲ್ಲಿ ಚಿತ್ರ ರಚಿಸುತ್ತಿದ್ದರೆಂದೂ, ಇಂದು ಚಿತ್ರ ಅಥವಾ ಮೂರ್ತಿ ಇಲ್ಲವಾದ್ದರಿಂದ ಆ ಗುಹೆಯನ್ನು ಯಾವ ದೇವರಿಗಾಗಿ ರಚಿಸಿದ್ದರೆಂದು ಶಾಸನಗಳಿಂದ ತಿಳಿಯಬಹುದು. ಉದಾಹರಣೆಗೆ ಮಂಡಗಪಟ್ಟುವಿನಲ್ಲಿ ಗುಹಾಲಯವನ್ನು ತ್ರಿಮೂರ್ತಿಗೆ ಅರ್ಪಿಸಿದ್ದು ಅಲ್ಲಿ ಮೂರು ಗರ್ಭಗುಡಿಯಂತಹ ರಚನೆ ಕಂಡುಬರುವುದರಿಂದ ಈ ಮೂರರಲ್ಲಿ ತ್ರಿಮೂರ್ತಿಗಳ ಚಿತ್ರಗಳನ್ನು (ಶಿವ, ವಿಷ್ಣು, ಬ್ರಹ್ಮ) ರಚಿಸಿರಬಹುದೆಂದು ಕೆ.ಆರ್.ಶ್ರೀನಿವಾಸನ್ ಅಭಿಪ್ರಾಯಪಡುತ್ತಾರೆ. ಇದರ ಕಾಲವು ೬೦೦-೬೩೦ ಆಗಿದ್ದು ಇಲ್ಲಿ ರಚಿಸಿರಬಹುದಾದ ಶಿವನ ಚಿತ್ರವೇ ಶೈವ ಪರವಾದ ಶಿಷ್ಟ ಚಿತ್ರಗಳಲ್ಲಿ ಪ್ರಥಮವೆನ್ನಬಹುದು.[೪] ಶೈವ ಪರವಾದ ಚಿತ್ರಗಳನ್ನು ಆದಿಮಗುಹೆಯಲ್ಲಿಯೂ ಗುರುತಿಸಿದ್ದಾರೆ.

ಉತ್ತರಭಾರತದ ಶೈವ ಮತದ ಪ್ರಭಾವವು ಮಧ್ಯಭಾರತದ ಭೌಗೋಳಿಕ ಮೇರೆಗಳನ್ನು ಮೀರಿ ದಕ್ಷಿಣದಲ್ಲೂ ಆಚರಣೆಯಲ್ಲಿತ್ತು ಎಂಬುದಕ್ಕೆ ತಮಿಳುನಾಡು ಶೈವ ಸಂತರಾದ ನಾಯನಾರರನ್ನ ಉದಾಹರಿಸಬಹುದು. ಹೀಗಾಗಿ ಶೈವ ಮತದ ಪ್ರಭಾವವು ಕರ್ನಾಟಕವನ್ನು ಒಳಗೊಂಡಂತೆ

ದಕ್ಷಿಣಭಾರತದಲ್ಲಿ ಪ್ರಬಲವಾಗಿಯೇ ವ್ಯಾಪಿಸಿತ್ತು ಎಂದು ಹೇಳಲಾಗಿದೆ. ವಿಜಯನಗರ ಪೂರ್ವಕಾಲದಲ್ಲಿ ಸಂತರು ವಿದ್ವಾಂಸರಿಂದ ಸ್ಥಾಪಿತವಾಗಿದ್ದ ವೀರಶೈವ ಪರಂಪರೆಯ ಉದ್ಧಾಮ ಪರಂಪರೆಯು ಅನಂತರ ಕೆಳದಿ,ಮೈಸೂರು, ಕೊಡಗು, ಸ್ವಾದಿ, ಬಿಳಗಿ (ಶಿವಮೊಗ್ಗ), ಚಿತ್ರದುರ್ಗ ಮತ್ತಿತರ ರಾಜಕೀಯವಾಗಿ ಪ್ರಮುಖವಾಗಿದ್ದ ಕೇಂದ್ರಗಳಲ್ಲಿ ಹಂಚಿಹೋಯಿತು. ಪಾಳೇಗಾರರ ನೆಲೆಗಳಾಗಿದ್ದ ಈ ಕೇಂದ್ರಗಳು ಮೊದಲಿಗೆ ವಿಜಯನಗರಕ್ಕೆ ಅಧೀನವಾಗಿದ್ದವು. ವಿಜಯನಗರ ಪತನಾನಂತರ ಸ್ವತಂತ್ರ್ಯವಾದವು. ಆದರೆ ಅದೇ ಸಾಂಸ್ಕೃತಿಕ ಮತ್ತು ರಾಜಕೀಯ ಪರಂಪರೆಗಳನ್ನು ಇವು ಮುಂದುವರಿಸಿದವು. ಮೇಲೆ ಹೇಳಿದ ಕೇಂದ್ರಗಳು ವೀರಶೈವರಿಗೆ ಸಹಾಯ ಮಾಡಿದವು. ಶೈವ ಧರ್ಮೀಯರು ಅದಕ್ಕೆ ಪ್ರತಿಯಾಗಿ ಈ ರಾಜಕೀಯ ಶಕ್ತಿಗಳ ಬಲವರ್ಧನೆಗೆ ಸಹಾಯ ಮಾಡಿದರು." ಇದರ ಫಲವಾಗಿ ಕರ್ನಾಟಕದಾದ್ಯಂತ ರಚನೆಯಾದ ದೇವಾಲಯಗಳಲ್ಲಿ ಶೈವ ಧರ್ಮ ಆಧಾರಿತ ವರ್ಣಚಿತ್ರಗಳನ್ನು ರಚನೆಗೆ ಪ್ರೋತ್ಸಾಹವನ್ನು ನಾವು ಊಹಿಸಬಹುದಾಗಿದೆ. ಮತ್ತು ವಿಶೇಷವಾಗಿ ತುಮಕೂರು ಜಿಲ್ಲೆಯ ದೇವಾಲಯಗಳಲ್ಲಿ ಶೈವ ವೈಷ್ಣವ ದೇವಾಲಯಗಳೆರಡರಲ್ಲೂ ಶೈವಧರ್ಮ ಹಿನ್ನೆಲೆಯ ವರ್ಣಚಿತ್ರಗಳನ್ನು ಗುರುತಿಸಲಾಗಿದೆ.

ಸೀಬಿಯ ನರಸಿಂಹ ದೇವಾಲಯದ ೯ನೇ ಅಂಕಣವು ಶೈವ ಪುರಾಣದ ಕಥಾವಸ್ತುವಿಗೆ ಮೀಸಲಾಗಿದೆ. ಈ ಅಂಕಣದಲ್ಲಿ ಪ್ರಧಾನವಾಗಿ ತ್ರಿಪುರ ಸಂಹಾರದ ಚಿತ್ರಣದೊಂದಿಗೆ ವರ್ಣಚಿತ್ರಗಳ ರಚನೆ ಪ್ರಾರಂಭವಾಗುತ್ತದೆ. ಈ ಚಿತ್ರದ ಹಿನ್ನೆಲೆಯಲ್ಲಿಒಂದು ರೋಚಕವಾದ ಪೌರಾಣಿಕ ಕಥೆಯು ಇದೆ. ತ್ರಿಪುರ ಎಂದರೆ ಮೂರು ಪುರಗಳು ಎಂದರ್ಥ. ಈ ಮೂರು ಪುರಗಳನ್ನು ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ, ಎಂಬ ರಾಕ್ಷಸರು ಆಳುತ್ತಿದ್ದರು. ಆ ಮೂರು ಪುರಗಳು ಚಿನ್ನ ಬೆಳ್ಳಿ ಮತ್ತು ಕಬ್ಬಿಣದ ನಗರಳೆಂದು ಕರೆಯಲ್ಪಟ್ಟಿದ್ದವು, ಅವರನ್ನು ಗೆಲ್ಲಲು ಯಾರಿಂದಲೂ ಸಾಧ್ಯವಿರಲಿಲ್ಲ ದೇವತೆಗಳಿಗೆ ಈ ರಾಕ್ಷಸರ ಕಾಟ ವಿಪರೀತವಾದಾಗ ಅವರನ್ನು ನಾಶ ಮಾಡಬೇಕೆಂದು ಎಲ್ಲಾ ದೇವತೆಗಳು ಶಿವನಲ್ಲಿ ಮೊರೆ ಹೋಗಿ ರಾಕ್ಷಸರನ್ನು ಸಂಹರಿಸಲು ಬೇಡಿಕೊಳ್ಳುತ್ತಾರೆ. ಎಲ್ಲಾ ದೇವತೆಗಳು ತಮ್ಮ ಶಕ್ತಿಯ ಅರ್ಧ ಭಾಗವನ್ನು ಶಿವನಿಗೆ ಕೊಟ್ಟರು ಅಂದಿನಿಂದ ಶಿವನು ಮಹಾದೇವನಾದನು. ಶಿವನು ಇಂದ್ರ, ವಿಷ್ಣು, ಬ್ರಹ್ಮ, ಇವರ ಸಹಕಾರದಿಂದ ರಥವನ್ನು ಸಿದ್ಧಪಡಿಸಿಕೊಂಡನು. ಇಲ್ಲಿ ಭೂಮಿಯೇ ರಥ, ಬ್ರಹ್ಮನೇ ಸಾರತಿ, ಸೂರ್ಯಚಂದ್ರರೇ ರಥದ ಗಾಲಿಗಳಾದರು, ಅಷ್ಟದಿಕ್ಪಾಲಕರೇ ರಥಾಶ್ವಗಳು, ಆದಿ ಶೇಷ ಸರ್ಪವೇ ಕುದುರೆಗಳಿಗೆ ಬಿಗಿದ ಹಗ್ಗವಾಯಿತು.

ವಜ್ರಾಧಾರಿಯಾಗಿ ಶಿವ ತ್ರಿಪುರಾಸುರರ ಮೇಲೆ ಯುದ್ಧಕ್ಕೆ ಹೋದ ಈ ರಾಕ್ಷಸರ ಮಡದಿಯರ ವ್ರತನಿಷ್ಟೆಯಿಂದ ಅವರನ್ನು ಗೆಲ್ಲಲಾಗುತ್ತಿರಲಿಲ್ಲ. ಆಗ ವಿಷ್ಣು ಅರಳೀಮರದ ಅವತಾರ ತಾಳಿ ಅವರ ವ್ರತ ಭಂಗಮಾಡಿದ, ಅನಂತರ ಶಿವ ತ್ರಿಪುರವನ್ನು ಗೆದ್ದ ಚಿತ್ರದಲ್ಲಿ ಶಿವನು ರುಂಡಮಾಲೆಯನ್ನು ಧರಿಸಿದ್ದು ಎಡಗಾಲನ್ನು ಮೇಲೆತ್ತಿ ಬಲಗಾಲ ತುದಿಯ ಮೇಲೆ ಆಕರ್ಷಕವಾದ ಭಂಗಿಯಲ್ಲಿ ಬಾಣ

ಬಿಡುತ್ತಿರುವುದು ವೀರರಸವನ್ನುಂಟುಮಾಡುತ್ತದೆ. ಮಂದಾರ ಪರ್ವತವನ್ನು ಶಿವನು ಬಿಲ್ಲನ್ನಾಗಿ ಮಾಡಿಕೊಂಡಿದ್ದಾನೆ. ವಾಸುಕಿಯೇ ಬಿಲ್ಲಿನದಾರ, ಅಗ್ನಿ, ವಿಷ್ಣು, ವಾಯು, ಇವರು ಬಾಣಗಳಾಗಿದ್ದಾರೆ.

ಇದೇ ಅಂಕಣದ ಮತ್ತೊಂದು ದೃಶ್ಯವು ಗಿರಿಜಾಕಲ್ಯಾಣವನ್ನು ಪ್ರತಿನಿಧಿಸುತ್ತದೆ. ಶಿವ ಮತ್ತು ಪಾರ್ವತಿಯರ ವಿವಾಹ ಸಂದರ್ಭಕ್ಕೆ ಋಷಿ ಮುನಿಗಳು ವಿವಿದ ದೇವತೆಗಳು ನೆರೆದಿದ್ದಾರೆ. ಶಿವನ ಜೊತೆಗೂಡಿ ಪಾರ್ವತಿ ಆಸೀನಳಾಗಿದ್ದಾಳೆ. ಮತ್ತೊಂದು ದೃಶ್ಯದಲ್ಲಿ ಕಿರಾತಾರ್ಜುನನ ಸರಣಿ ಚಿತ್ರಣವಿದೆ. ಹಿಮಾಲಯ ಪರ್ವತದಲ್ಲಿ ಶಿವನು ಪದ್ಮಾಸನ ಭಂಗಿಯಲ್ಲಿ ಆಸೀನನಾಗಿದ್ದಾನೆ. ಅವನ ಮುಂಭಾಗದಲ್ಲಿ ಪಾರ್ವತಿಯು ಹೂವಿನ ಹಾರವನ್ನು ಹಿಡಿದು ನಿಂತಿದ್ದಾರೆ. ಇನ್ನೊಂದು ಕೊನೆಯಲ್ಲಿ ಅರ್ಜುನನು ತನ್ನೆರಡು ಕೈಗಳನ್ನು ಮೇಲೆತ್ತಿ ಮುಗಿದು ನಿಂತಿದ್ದಾಳೆ. ಕಿರಾತಾರ್ಜುನಿಯರ ಈ ದೃಶ್ಯವು ಹಿರಿಯೂರಿನ ತೇರು ಮಲ್ಲೇಶ್ವರ ದೇವಾಲಯದಲ್ಲೂ ಚಿತ್ರಿಸಲಾಗಿದೆ. ಇದೇ ಒಂಭತ್ತನೇ ಅಂಕಣದ ಮಧ್ಯಭಾಗದಲ್ಲಿ ಉಮಾಮಹೇಶ್ವರನನ್ನು ಕಿರೀಟಧಾರಣೆಯ ವೇಷಭೂಷಣದಲ್ಲಿ ಚಿತ್ರಿಸಲಾಗಿದೆ. ಇಲ್ಲಿ ಉಮಾ ಅವನ ಎಡಭಾಗದಲ್ಲಿಯೂ, ಗಂಗೆ ಬಲಭಾಗದಲ್ಲಿ ಚಿತ್ರಿಸಲ್ಪಟ್ಟಿದ್ದಾರೆ. ಮೂರು ಕಮಾನುಗಳು ಚೌಕಟ್ಟುಗಳಂತೆ ಅಲಂಕರಿಸಲ್ಪಟ್ಟಿದ್ದು ಎಡಭಾಗದಲ್ಲಿ ಗಣಪತಿ ಆಸೀನನಾಗಿದ್ದರೆ, ಬಲಭಾಗದಲ್ಲಿ ಹಿರಿಯ ಋಷಿಮುನಿಗಳು ಇದ್ದಾರೆ. ಶಿವನು ಅಭಯ ಮುದ್ರಾಕಾರದಲ್ಲಿ ಚಿತ್ರಿಸಲ್ಪಟ್ಟಿದ್ದಾನೆ. ಮದ್ಯದ ಕಮಾನಿನೊಳಗೆ ಶಿವ ವಿಷ್ಣು ಬ್ರಹ್ಮ ಈ ತ್ರಿಮೂರ್ತಿಗಳು ಚಿತ್ರಸಲ್ಪಟ್ಟಿದ್ದಾರೆ. ಇನ್ನೊಂದು ಭಾಗದಲ್ಲಿ ತುಂಬುರ ಮತ್ತು ನಾರದ ಈ ದೃಶ್ಯವನ್ನು ನೋಡುತ್ತಿದ್ದಾರೆ. ಈ ಮಧ್ಯ ಅಂಕಣದಲ್ಲಿ ಸಣ್ಣ ಪ್ರಮಾಣದ ಚೌಕಟ್ಟುಗಳಿದ್ದು ಅವುಗಳಲ್ಲಿ ಮೊದಲನೆಯದು ಯೋಗಾಸನ ಮೂರ್ತಿ, ಕಿರಾತಾರ್ಜುನ ಮೂರ್ತಿ, ನಟರಾಜ, ನಂದೀಶ್ವರ, ಗಜಾಸುರ, ವೇದಮೂರ್ತಿ ಕಂಡೇಶ್ವರ, ಶರಬೇಶಮೂರ್ತಿ, ರಾವಣೇಶ್ವರ, ನೀಲಕಂಠ, ಗಣಪತಿಗೆ ಬೋಧಿಸುತ್ತಿರುವ ಶಿವ, ಷಣ್ಮುಖನ ಜೊತೆಗಿರುವ ಶಿವ ಮತ್ತು ಪಾರ್ವತಿ, ಹಾಗೂ ದಕ್ಷಿಣಮೂರ್ತಿ ಇವುಗಳು ಚಿತ್ರಿಸಲ್ಪಟ್ಟಿವೆ.

ಕೆರೆಗೋಡಿಯ ಶಂಕರೇಶ್ವರ ದೇವಾಲಯವು ಶೈವಧರ್ಮದ ದೇವಾಲಯವಾದರೂ ಶೈವ ಮತ್ತು ವೈಷ್ಣವರ ಸಂಗಮವೆಂಬಂತೆ ಕಂಡುಬರುತ್ತದೆ. ಈ ದೇವಾಲಯದಲ್ಲಿ ಶಿವನ ತ್ರಿಪುರ ಸಂಹಾರ, ಗಿರಿಜಾ ಕಲ್ಯಾಣ, ಶಿವನಪಂಚವಿಶಂತಿ ೨೫ ಲೀಲೆಗಳು ಸೇರಿದಂತೆ ಹಲವಾರು ಚಿತ್ರಗಳನ್ನು ರಚಿಸಲಾಗಿದೆ. ತ್ರಿಪುರಸಂಹಾರದ ಚಿತ್ರವು ಮೇಲೆ ಹೇಳಿದ ಹಿನ್ನೆಲೆಯನ್ನು ಹೊಂದಿದ್ದರೂ. ಚಿತ್ರ ರಚನೆಯಲ್ಲಿ ಕಲಾವಿದನು ಸ್ವಲ್ಪ ಬದಲಾವಣೆ ಮಾಡಿಕೊಂಡಿದ್ದಾನೆ. ಒಂದು ದೊಡ್ಡ ಅಂಕಣದಲ್ಲಿ ಶಿವನು ಸರ್ವಾಂಲಂಕಾರ ಭೂಷಣನಾಗಿ ರಥವನ್ನೇರಿ ಯುದ್ಧದಲ್ಲಿ ನಿರತನಾಗಿದ್ದಾನೆ. ತ್ರಿಪುರರು ವೇಷಮರೆಸಿಕೊಂಡು ಯುದ್ಧದಲ್ಲಿ ತೊಡಗಿ, ಶಿವನ ಆರ್ಭಟಕ್ಕೆ ಸೋತು ಅವರ ನಿಜ ಸ್ವರೂಪದ ರುಂಡಗಳು ಚೆಲ್ಲಾಡಿವೆ. ರಕ್ತದೋಕುಳಿ ಆಕಾಶಕ್ಕೂ ಭೂಮಿಗೂ ಚೆಲ್ಲಿ. ರೆಕ್ಕೆಗಳುಳ್ಳ ದೇವಾನು ದೇವತೆಗಳು ಪುಷ್ಪವೃಷ್ಟಿಗರೆಯುತ್ತಿದ್ದಾರೆ. ಈ ಅಂಕಣದ ಸುತ್ತಲಿನ ತೊಲೆಯಲ್ಲಿ ಈ ಯುದ್ಧದ ಹಿನ್ನೆಲೆಯ ಕೆಲವು

ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ನಾಗರಪೂಜೆ, ತ್ರಿಪುರ ಪತ್ನಿಯರ ವ್ರತಭಂಗ, ಶಿವನ ರಥ, ಗಣಪತಿ, ನಂದಿವಾಹನ, ಶಿವ, ಪಾರ್ವತಿ, ತಾರಕಾಕ್ಷ, ವಿದ್ಯುನ್ಮಾಲಿ, ಕಮಲಾಕ್ಷರು ಗುರುಗಳಲ್ಲಿ ಬಂದು ನಮಸ್ಕರಿಸುತ್ತಿರುವುದು, ಗುರುಗಳಾದ ಶುಕ್ರಾಚಾರಿ, ಹಾಗೂ ಅಷ್ಟ, ದೇವಾನುದೇವತೆಗಳು ಶಿವನ ರಥಕ್ಕೆ ಶಕ್ತಿ ತುಂಬುತ್ತಿರುವುದು, ನಾರದ, ಬ್ರಹ್ಮ, ವಿಷ್ಣು ಮತ್ತು ನಂದಿ, ಶಿವಪಾರ್ವತಿ, ಇನ್ನು ಮುಂತಾದ ಚಿತ್ರಗಳಿಂದ ತುಂಬಿಹೋಗಿದೆ.

ಶಿವನ ಪಂಚ ವಿಂಶತಿ ಚಿತ್ರವು ಮಧ್ಯದ ಅಂಕಣದ ತುಂಬ ಚಿಕ್ಕ ಚಿಕ್ಕ ಅಂಕಣವನ್ನಾಗಿ ನಿರ್ಮಿಸಿಕೊಂಡು ಇಪ್ಪತ್ತೈದು ಲೀಲೆಗಳನ್ನು ಒಂದೇ ಕಡೆ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಸುಕಾಸನ ಮೂಡಿ, ಕಾಲಭೈರವ, ಪಶುಪತಿ, ದಕ್ಷಮೂರ್ತಿ, ಮಹಾಲಿಂಗಭವ, ಗಜ ಸಂಹಾರ, ಚಕ್ರಧನಪತಿ, ವಿಷ್ಣು ಧರ್ಮಪತಿ, ಗಣೇಶ ವರಪ್ರಸಾದ, ಚಂಡೇಶ್ವರ ಪತಿ, ವೀರಭದ್ರ, ಬೈರವ, ಶರಭಿವತಾರ, ಅರ್ಧನಾರೀಶ್ವರ, ಶಂಭು ಶಂಕರ, ಜಲಂಧರ ಸಂಪತಿ, ತ್ರಿಪುರ ಸಂಹಾರ, ಕಂಕಣಪತಿ, ಕಾಮಪತಿ, ಗಿರಿಜಕಲ್ಯಾಣ, ನಟರಾಜ, ವೃಷಭಪತಿ, ಉಮಾಪತಿ, ಚಂದ್ರದಾ ಪತಿ ಹೀಗೆ ಇಪ್ಪತ್ತೈದು ಲೀಲೆಗಳನ್ನು ಕಲಾವಿದನು ಸಂಕೇತಿಕವಾಗಿ ಸೂಚಿಸಿದ್ದಾನೆ. ಈ ಚಿತ್ರಗಳು ಜನಪದರ ಶೈಲಿಯಲ್ಲಿರುವುದರಿಂದ ಗುರುತಿಸಲು ಕಷ್ಟಸಾಧ್ಯವಾದರೂ ಅವುಗಳ ಸಂಕೇತದಿಂದ ಹಾಗೂ ಆಯಾ ಅವತಾರ ಮಗ್ಗುಲಲ್ಲೇ ಹೆಸರು ಬರೆದಿರುವುದರಿಂದ ಸುಲಭವಾಗಿ ಗುರುತಿಸಲು ಸಾಧ್ಯವಾಗುತ್ತದೆ. ಅಲ್ಲದೆ ಮುಖ್ಯದ್ವಾರದ ಮೇಲೆ ಸಮುದ್ರಮಂಥನ ಚಿತ್ರವನ್ನು ಚಿತ್ರಿಸಲಾಗಿದೆ.

ರಂಗಾಪುರದ ರಂಗನಾಥಸ್ವಾಮಿ ದೇವಾಲಯದಲ್ಲಿ ಮಧ್ಯದ ಅಂಕಣವು ವಿಷ್ಣುವಿನ ದಶಾವತಾರಕ್ಕೆ ಮೀಸಲಿಟ್ಟು ಸುತ್ತಲಿನ ತೊಲೆಗಳಲ್ಲಿ ರಾಮನ ಪಟ್ಟಾಭಿಷೇಕ, ಸೀತಾಕಲ್ಯಾಣ, ಮುಮ್ಮಡಿಯವರ ದರ್ಬಾರ್ ಹಾಗೂ ಗಿರಿಜಾಕಲ್ಯಾಣದ ಚಿತ್ರವು ರಚನೆಗೊಂಡಿದೆ. ಗಿರಿಜಾಕಲ್ಯಾಣದಲ್ಲಿ ಪರ್ವತರಾಜನು ಗಿರಿಜೆಯನ್ನು ಶಿವನಿಗೆ ಧಾರೆ ಎರೆಯುತ್ತಿರುವುದು, ಕಲ್ಯಾಣ ಮಹೋತ್ಸವದಲ್ಲಿ ಬ್ರಹ್ಮ, ವಿಷ್ಣು, ಗಣಪತಿ ಮುಂತಾದ ದೇವತೆಗಳು ಒಂದು ಕಡೆಯಾದರೆ, ಮತ್ತೊಂದು ಕಡೆ ಪರ್ವತರಾಜನ ಹೆಂಡತಿ, ಹಾಗೂ ಅರಮನೆ ಪರಿವಾರದವರ ಚಿತ್ರಗಳಿವೆ.

ಗುಬ್ಬಿಯ ಓಹಿಲೇಶ್ವರ ದೇವಾಲಯದಲ್ಲಿ ಶಿವನ ಪಂಚವಿಶಂತಿ ೨೫ ಲೀಲೆಗಳು ಇತ್ಯಾದಿ ಚಿತ್ರಗಳು ಇದ್ದವೆಂದು ಸಿ.ಹಯವದನರಾಯರು ತಮ್ಮ ಮೈಸೂರು ಗ್ಯಾಸೆಟಿಯರ್‌ನಲ್ಲಿ ಹೇಳಲಾಗಿದೆ. ಆದರೆ ಅಲ್ಲಿ ಎಲ್ಲಿಯೂ ಚಿತ್ರಗಳಿದ್ದು ಯಾವುದೇ ಕುರುಹುಗಳು ದೊರೆಯುವುದಿಲ್ಲ ಡಾ.ಅ.ಲ.ನರಸಿಂಹನ್‌ರವರು ಹೇಳಿದ್ದಾರೆ. ಹಯವದನರಾಯರು ಕೊಡುವ ವಿವರಣೆಗಳು ಸಮೀಪದ ತಿಪಟೂರು ಬಳಿಯ ಕೆರೆಗೋಡಿರಂಗಾಪುರದಲ್ಲಿಯ ಚಿತ್ರಗಳಿಗೆ ಸರಿಹೊಂದುವುದರಿಂದ ಕಣ್ತಪ್ಪಿನಿಂದಾಗಿ ಅದಲು ಬದಲಾಗಿರಬೇಕು ಎನ್ನಬಹುದು.[೬]

ಬೆನಕನಕೆರೆಯ ಚನ್ನಕೇಶವ ದೇವಾಲಯದಲ್ಲಿ ವೈಷ್ಣವ ಧರ್ಮದ ಚಿತ್ರಗಳು ಹೆಚ್ಚಾಗಿದ್ದು ಶಿವ ಪಾರ್ವತಿಯ ಚಿತ್ರ ಮಾತ್ರ ರಚಿಸಲಾಗಿದೆ. ಶಿವನು ಗಂಗೆಯನ್ನು ಧರಿಸಿ ಕೈಯಲ್ಲಿ ತ್ರಿಶೂಲವನ್ನು ಹಿಡಿದಿದ್ದಾರೆ. ಎಡಗಡೆಯಲ್ಲಿ ಪಾರ್ವತಿಯು ಸರ್ವಾಲಂಕಾರ ಭೂಷಿತಳಾಗಿ ಅಭಯ ಮುದ್ರೆಯೊಂದಿಗೆ ಪೀಠದ ಮೇಲೆ ಕುಳಿತು ಭಕ್ತರಿಗೆ ಆಶೀರ್ವದಿಸುತ್ತಿದ್ದಾಳೆ. ಮುಂದೆ ನಂದಿಯು ಉಪಸ್ಥಿತವಿದೆ. ಈ ಒಂದು ಚಿತ್ರವನ್ನು ಬಿಟ್ಟರೆ ಬೇರಾವ ಚಿತ್ರಗಳು ಕಾಣುವುದಿಲ್ಲ. ಈ ಚಿತ್ರವು ಜಾನಪದ ಶೈಲಿಯ ವಿಶಾಲ ಹರವಿನೊಂದಿಗೆ ರಚನೆಯಾದ ಚಿತ್ರವಾಗಿದೆ.

ತುಮಕೂರು ಜಿಲ್ಲೆಯಲ್ಲಿರುವ ಶೈವ ಧರ್ಮದ ಹಿನ್ನೆಲೆಯ ಚಿತ್ರಗಳಲ್ಲಿ ವಿಶೇಷವಾಗಿ ಶಿವನಪಂಚವಿಂಶತಿ ಚಿತ್ರಗಳು ಕೆರೆಗೋಡಿ, ಸಿಬಿ, ಮತ್ತು ಹಂಪಿ ವಿರೂಪಾಕ್ಷ ದೇವಾಲಯದಲ್ಲಿ ಮಾತ್ರ ಚಿತ್ರಿಸಿದ್ದಾರೆ. ಈ ಚಿತ್ರಗಳು ಕರ್ನಾಟಕದಲ್ಲಿ ಈ ಮೂರು ಸ್ಥಳಗಳಲ್ಲಿ ಬಿಟ್ಟರೆ ಬೇರೆ ಯಾವ ಸ್ಥಳದಲ್ಲಿ ಕಂಡುಬರುವುದಿಲ್ಲ ಎನ್ನುವುದು. ಡಾ.ಅ.ಲ.ನರಸಿಂಹನ್‌ರವರ ಅಭಿಪ್ರಾಯವಾಗಿದೆ. ಸಿಬಿ ಮತ್ತು ಹಂಪಿಯಲ್ಲಿ ಸುಂದರವಾದ ಶಾಸ್ತ್ರ ಬದ್ಧವಾದ ನುರಿತ ಕಲಾವಿದರಿಂದ ರಚನೆಗೊಂಡ ಚಿತ್ರಗಳಿವೆ. ಕೆರೆಗೋಡಿಯ ಚಿತ್ರಗಳು ಸಾಂಕೇತಿಕವಾಗಿ ಚಿತ್ರಿಸಿರುವುದು ಸಿಬಿಯ ಪ್ರಭಾವದಿಂದ ಆಗಿವೆ ಎನ್ನಬಹುದು. ಈ ಹಿಂದೆ ಈ ಸ್ಥಳದಲ್ಲಿ ಶಿವಲೀಲೆಗೆ ಸಂಬಂಧಿಸಿದ ಚಿತ್ರಗಳು ಇದ್ದು ಅವು ಹಾಳಾದ ಕಾರಣ ಈ ಚಿತ್ರಗಳನ್ನು ರಚಿಸಿರಬಹುದು ಎನ್ನುವುದು ಅಲ್ಲಿನ ಸ್ಥಿತಿಗತಿಯನ್ನು ನೋಡಿದಾಗ ಅನ್ನಿಸುತ್ತದೆ. ಪಕ್ಕದ ಅಂಕಣವು ತ್ರಿಪುರ ಸಂಹಾರದ ಹಿನ್ನೆಲೆಯ ಚಿತ್ರರಚನೆಯಾಗಿರುವುದನ್ನು ಗಮನಿಸಿದರೆ ಇದು ಕೂಡಾ ಜನಪದ ಶೈಲಿಯಲ್ಲಿ ರಚನೆಯಾಗಿದ್ದು ತಿಳಿದುಬರುತ್ತದೆ.

ಬೇರೆ ಭಾಗಗಳಲ್ಲಿ ಗಿರಿಜಾಕಲ್ಯಾಣದ ಒಂದು ಚಿತ್ರವನ್ನು ಬಿಟ್ಟರೆ ಬೇರಾವ ಚಿತ್ರಗಳು ಹೆಚ್ಚಾಗಿ ಕಂಡು ಬರುವುದಿಲ್ಲ, ಅಲ್ಲಲ್ಲಿ ಶಿವ ಪಾರ್ವತಿಯರ ಬಿಡಿ ಚಿತ್ರಗಳು ಕೆಲವು ಮನೆಗಳಲ್ಲಿ ಕಂಡು ಬರುತ್ತವೆ. ಮೈಸೂರು ಸಾಂಪ್ರಾದಾಯಿಕ ಕಲಾವಿದರಿಂದ ಬಿಡಿ ಚಿತ್ರಗಳು ರಚನೆಗೊಂಡಿರುವುದು ಹೆಚ್ಚಾಗಿ ಗುಬ್ಬಿ ನಗರದಲ್ಲಿ ಕಾಣಸಿಗುತ್ತದೆ. ಹೀಗೆ ಶೈವಧರ್ಮದ ಹಿನ್ನೆಲೆಯ ಚಿತ್ರಗಳು ಮಠ, ದೇವಾಲಯ, ಹಾಗೂ ಆಸಕ್ತ ಕಲಾಪೋಷಕರ, ದೈವ ಭಕ್ತರ ಧರ್ಮಾನುಯಾಯಿಗಳ ಮನೆಗಳಲ್ಲಿ ಕಂಡುಬರುತ್ತವೆ.



ಶಿವ ಪಾರ್ವತಿ



ವಿಷ್ಣು ಲಕ್ಷ್ಮಿ



ಬ್ರಹ್ಮ ಸರಸ್ವತಿ

# ವೈಷ್ಣವ ಧರ್ಮದ ಹಿನ್ನಲೆಯ ಭಿತ್ತಿ ಚಿತ್ರಗಳು

ಸಂಕೀರ್ಣವಾದ ಧರ್ಮ ಎಂಬುದಕ್ಕೆ ಕಲಾವಿದರು ಒಂದು ಮೂರ್ತರೂಪ ನೀಡಿ ಕಲಾಕೃತಿಯಾಗಿಸುವಲ್ಲಿ ಮಾಡಿರುವ ಪ್ರಯತ್ನಗಳು ಕುತೂಹಲಕಾರಿಯಾದವು. ಧರ್ಮವೇ ತನ್ನ ಪ್ರಚಾರಕ್ಕೆ ಕಲೆಗಳನ್ನು ಬಳಸಿಕೊಂಡಿತೋ ಅಥವಾ ಕಲೆ ತನ್ನ ಅಸ್ತಿತ್ವವನ್ನು ಬಳಸಿಕೊಳ್ಳಲು, ಧರ್ಮದ ಆಶ್ರಯ ಪಡೆಯಿತೋ ಎಂಬುದು ಚರ್ಚಿತ ವಿಷಯ. ಕಲಾಕೃತಿಗಳ ಸ್ವರೂಪ ಎಂಥವುದೇ ಆಗಿರಲಿ ಧರ್ಮ ತನ್ನ ಪ್ರಚಾರ ಕಾರ್ಯಕ್ಕೆ ಕಲೆಯನ್ನು ಕಲೆ ತನ್ನ ಉಳಿವಿಗೆ ಧರ್ಮವನ್ನು ಆಶ್ರಯಿಸಿದ್ದು ನಿಜ.[೧] ಇವೆರಡು ಪರಸ್ಪರ ಪೂರಕವಾಗಿ ಇಂದಿಗೂ ಕಾಣ ಸಿಗುತ್ತವೆ.

ಒಟ್ಟಾರೆ ಧರ್ಮ ಎಂಬುದು ಹಲವಾರು ಸಂಕೇತಗಳಿಂದ ಕೂಡಿದ ದೇವರು, ದೇವತೆ, ಪರಿವಾರ ದೇವತೆ ಮುಂತಾದವುಗಳ ಮೂರ್ತರೂಪ ಪಡೆದಿರುತ್ತದೆ. ಒಂದು ತತ್ವ, ಜಾತಿ, ವರ್ಗ ಇತ್ಯಾದಿಗಳನ್ನು ಅದು ಒಳಗೊಂಡಿರುತ್ತದೆ. ಅಂದರೆ ಸ್ಪಷ್ಟವಾಗಿ ಗುರುತಿಸಿಬಹುದಾದಂತಹ ಪ್ರತ್ಯೇಕತೆಯನ್ನು ಧರ್ಮಗಳು ಹೊಂದಿರುತ್ತವೆ. ಧರ್ಮದ ವಿವರಣೆ ನೀಡುವಾಗ ಆಯಾ ಧರ್ಮದಲ್ಲಿ ಬಂದ ಚಿಂತಕರು ಆ ವಿವರಣೆಯನ್ನು ಒಂದು ತತ್ವವಾಗಿ ಹೇಳುವುದುಂಟು. ಈ ತತ್ವಗಳು ಸಾಮಾನ್ಯ ಮನುಷ್ಯರಿಗೆ ಅಥವಾ ಬೇರೆಯ ಧರ್ಮಾವಲಂಬಿಗೆ ಸುಲಭವಾಗಿ ಅರ್ಥವಾಗದೆ ಹೋಗಬಹುದು. ಅಂತಹ ವೇಳೆಯಲ್ಲಿ ತತ್ವಗಳನ್ನು ಸುಲಭವಾದ ಕಥೆಗಳ ಮೂಲಕ ಹೇಳುವುದುಂಟು.[೨] ಚಿತ್ರ ಮತ್ತು ಶಿಲ್ಪ ಕಲಾವಿದರು ಅನುಸರಿಸಿರುವುದು ಈ ಬಗೆಯ ಕಥಾನಕಗಳನ್ನೆ

ಭಾರತದ ಧಾರ್ಮಿಕ ಚಳುವಳಿಗಳಲ್ಲಿ ಮೊದಲನೆಯದು ವೈದಿಕ ಧರ್ಮ. ಮುಂದೆ ಇದೇ ಭಾಗವತ ಪಂಥವೂ ಆಯಿತು. ವೈಧಿಕ ದೇವತೆಯ ವಿಷ್ಣುವಿನೊಡನೆ ಕೃಷ್ಣನನ್ನು ಸಮೀಕರಿಸುವ ಮೂಲಕ ಭಾಗವತ ಪಂಥ ಸಂಪ್ರದಾಯ ಬದ್ಧತೆಯ ಮೇಲೆ ಗೆಲುವು ಸಾಧಿಸಿತು. ಈ ಹಿನ್ನಲೆಯಲ್ಲಿ ವೈಧಿಕ ಅಥವಾ ವೈಷ್ಣವ ಸಂಪ್ರದಾಯದ ಚಿತ್ರಕಲೆ ಎಂದರೆ ಕೃಷ್ಣ ಹಾಗೂ ಆತನ ಅವತಾರಗಳಿಗೆ ಸಂಬಂಧಿಸಿದ ಕಲೆ ಎಂದು ಅರ್ಥೈಸಬಹುದು. ಚಿತ್ರ ವೈಷ್ಣವ ಗುಹಾಲಯದ ಏಕೈಕ ಉದಾಹರಣೆ ಎಂದರೆ ಬಾದಾಮಿಯ ಗುಹಾಲಯ-ಇಲ್ಲಿನ ಎರಡನೇ ಗುಹಾಲಯದಲ್ಲಿ ವೈಷ್ಣವ ಪರವಾದ ಹಲವಾರು ಚಿತ್ರಗಳು ಇವೆ. ಇದು ವರ್ಣಚಿತ್ರಕಲೆಗೆ ಮೊದಲ ಉಲ್ಲೇಖವೆಂದು ತಿಳಿಯಬಹುದಾಗಿದೆ.[೩]

ದಕ್ಷಿಣ ಭಾರತದ ವಿಷ್ಣುವಿನ ಅವತಾರದ ವರಾಹ, ನರಸಿಂಹ, ರಾಮಕೃಷ್ಣರಿಗೆ ವಿಶೇಷ ಪ್ರಾಮುಖ್ಯತೆ ಬಂದಿದ್ದು ಅವರ ಪರವಾದ ಆಲಯಗಳು ಹಾಗೂ ಚಿತ್ರಕಲೆಯನ್ನು ಕಾಣಬಹುದು. ಶ್ರೀರಂಗರಲ್ಲಿ, ಹೊಯ್ಸಳ ಕಾಲದ ಕೃಷ್ಣ ದೇವಾಲಯದಲ್ಲಿ ಕೆಲವು ಚಿತ್ರಗಳಿದ್ದು ಅವು ಹೊಯ್ಸಳರ ಕಾಲದ ರಚನೆಗಳು ಎಂದು ತಿಳಿಯಲಾಗಿದೆ. ಅಲ್ಲದೆ ಇಡೀ ದೇವಾಲಯದ ಸಂಕೀರ್ಣದಲ್ಲಿ ಅಲ್ಲಲ್ಲಿ ವೈಷ್ಣವಪರವಾದ ಕಥಾನಕಗಳ ಚಿತ್ರಗಳಿದ್ದು ವಿಜಯನಗರ ಕಾಲದಲ್ಲಿ ರಚಿತವಾದಂತಹವು. ಇದೇ ಕಾಲದ ಹಂಪೆಯ ವಿರೂಪಾಕ್ಷದೇವಾಲಯದಲ್ಲಿರುವ ಚಿತ್ರಗಳಲ್ಲಿ ಮಹಾಭಾರತದ ಕೆಲವು ದೃಶ್ಯಗಳಲ್ಲದೆ ದಶಾವತಾರ ಹಾಗೂ ಲೀಲೆಗಳಿಗೆ ಸಂಬಂಧಿಸಿದ ಚಿತ್ರಗಳನ್ನು ಕಾಣುತ್ತೇವೆ,

ವಿಜಯನಗರದ ಅವನತಿಯ ನಂತರದ ಅವರ ಸಾಮಂತರಾಗಿದ್ದ ಮೈಸೂರಿನ ರಾಜರು ಅವರ ಕಲಾ ಪ್ರೋತ್ಸಾಹವನ್ನು ತಮ್ಮ ಆಡಳಿತ ಭೂ ಪ್ರದೇಶದಲ್ಲಿ ಮುಂದುವರಿಸಿರುವುದಕ್ಕೆ ಅನೇಕ ನಿದರ್ಶನಗಳಿವೆ. ಮೈಸೂರು ಪ್ರಾಂತ್ಯಕ್ಕೆ ಸೇರಿದ ತುಮಕೂರು ಜಿಲ್ಲಾದ್ಯಾಂತ ಮೈಸೂರು ಅರಸರ ಕಾಲ ಭಿತ್ತಿ ವರ್ಣಚಿತ್ರಗಳನ್ನು ಗುರುತಿಸಲಾಗಿದೆ. ಈಗಾಗಾಲೇ ಪಟ್ಟಿ ಮಾಡಿರುವಂತೆ ತುಮಕೂರು ತಾಲ್ಲೂಕಿನ ಸಿಬಿ, ತಿಪಟೂರು ತಾಲ್ಲೂಕಿನ ಕೆರೆಗೋಡಿ ಮತ್ತು ರಂಗಾಪುರ, ತುರುವೆಕೆರೆ ತಾಲ್ಲೂಕಿನ ಬೆನಕನಕೆರೆ ಇಲ್ಲಿನ ದೇವಾಲಯಗಳ ಭಿತ್ತಿಗಳಲ್ಲಿ ವೈಷ್ಣವಧರ್ಮಾಧಾರಿತ ಚಿತ್ರಗಳನ್ನು ಚಿತ್ರಿಸಲಾಗಿದೆ.

ಸಿಬಿ ದೇವಾಲಯದ ಮುಖಮಂಟಪದ ಮೇಲ್ಭಾವಣೆ, ಮಹಾದ್ವಾರದ ಮೇಲ್ಭಾವಣಿ ಮತ್ತು ದೂಲಗಳ ಮೇಲೆಲ್ಲಾ ಚಿತ್ರಗಳಿವೆ. ಇಲ್ಲಿನ ಮುಖಮಂಟಪದ ಮೇಲ್ಭಾವಣೆಯ ಒಂಬತ್ತು ಅಂಕಣಗಳಲ್ಲಿ ಪ್ರಮುಖವಾಗಿ ಎಂಟು ಅಂಕಣಗಳು ವೈಷ್ಣವ ಧರ್ಮದ ಹಿನ್ನಲೆಯ ಚಿತ್ರಗಳಿಗೆ ಮೀಸಲಾಗಿರಿಸಲಾಗಿದೆ. ಈ ಚಿತ್ರಗಳಲ್ಲಿ ಭಾಗವತ ಪುರಾಣ, ಮಹಾಭಾರತ, ರಾಮಾಯಣ, ಬಾಲಖಂಡ ರಾಮಾಯಣ, ಅರಣ್ಯ ಖಂಡ, ರಾಮಾರ್ಯ ಯುದ್ಧಖಂಡ, ನರಸಿಂಹ ಪುರಾಣ, ವಿಷ್ಣು ದಶಾವತಾರ ಮುಂತಾದ ಕಥಾನಕ ದೃಶ್ಯಗಳನ್ನು ಚಿತ್ರಸಲಾಗಿದೆ. ಗರ್ಭಗುಡಿಯ ಪ್ರವೇಶ ದ್ವಾರದ ಎದುರು ಮುಖದ ತೊಲೆಯಲ್ಲಿ ವಿಷ್ಣುವಿನ ಅನಂತ ಶಯನಕಥಾನಕ ದೃಶ್ಯವನ್ನು ಚಿತ್ರಿಸಲಾಗಿದೆ.



ಎಡಭಾಗದ ಮೊದಲ ಅಂಕಣವು ಗಣೇಶ ದೇವರ ಚಿತ್ರದೊಂದಿಗೆ ಪ್ರಾರಂಭವಾಗುತ್ತದೆ. ಇದು ದೇವಕಿಯೊಂದಿಗೆ ವಾಸುದೇವನ ವಿವಾಹವನ್ನು ಪ್ರತಿನಿಧಿಸುತ್ತದೆ. ಬಹು ಸಂಖ್ಯೆಯಲ್ಲಿ ಪುರುಷರು ಮತ್ತು ಮಹಿಳೆಯರು ಮದುವೆಯ ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದಾರೆ. ದೇವಕಿಯ ಸೋದರನಾದ ಉಗ್ರಸೇನನ ಮಗನಾದ ಕಂಸನು ತನ್ನ ಸೋದರಿಯ ಮದುವೆಯ ಮೆರವಣಿಗೆಯಲ್ಲಿ ಕುದುರೆಯ ಸವಾರಿಯಲ್ಲಿರುವಂತೆ ಚಿತ್ರಿಸಲ್ಪಟ್ಟಿದೆ. ಇದಿಷ್ಟು ಭಾಗವತಾ ಪುರಾಣವನ್ನು ಆಧರಿಸಿದೆ. ಈ ಚಿತ್ರ ಸನ್ನಿವೇಶದ ಸ್ವಲ್ಪ ಅಂತರದ ಮತ್ತೊಂದು ಚಿತ್ರ ಸನ್ನಿವೇಶದಲ್ಲಿ ಕಂಸನು, ದೇವಕಿ ಮತ್ತು ವಾಸುದೇವನೊಂದಿಗೆ ವಾಗ್ವಾದದಲ್ಲಿದ್ದಾನೆ. ವಾಸುದೇವನು ಕಂಸನಿಗೆ ತನ್ನ ಕೈಗಳನ್ನು ಜೋಡಿಸಿ ರಮಿಸುತ್ತಿದ್ದಾನೆ. ಕಂಸನು ಪರಾಕ್ರಮದಲ್ಲಿ ಒಂದು ಕೈಯನ್ನು ಮೇಲೆತ್ತಿ ಆದೇಶಿಸುತ್ತಿದ್ದಾನೆ. ದೇವಕಿ ಮತ್ತು ವಾಸುದೇವನು ಬಂಧಿಸಲ್ಪಟ್ಟಿದ್ದಾರೆ. ಇಲ್ಲಿ

ಕಲಾವಿದನು ಕಂಸನಿಗೆ ಪೂರ್ವಜನ್ಮದ ದೈವೀ ಶಾಪವನ್ನು ಗ್ರಹಿಸಿ ದೇವಕಿಗೆ ಜನಿಸುವ ಮಕ್ಕಳನ್ನು ತನಗೆ ಕೊಡುವಂತೆ ಆದೇಶಿಸಿ ಅವರನ್ನು ಬಂಧನದಲ್ಲಿರಿಸಿರುವ ವಿಚಾರವನ್ನು ಚಿತ್ರದ ಮೂಲಕ ಅಭಿವ್ಯಕ್ತಿಸಿದ್ದಾನೆ. ಮತ್ತೊಂದು ದೃಶ್ಯವು ಕಂಸನು ದೇವಮಾನವನಾದ ನಾರದನೊಂದಿಗೆ ಸಲಹೆ ಸಂಭಾಷಣೆಯಲ್ಲಿರುವಂತೆ ಚಿತ್ರಿಸಿದೆ. ನಾಲ್ಕನೆ ದೃಶ್ಯವು ದೇವಕಿ ಮತ್ತು ವಾಸುದೇವರನ್ನು ಕಾವಲು ಕಾಯಲು ಕಂಸನಿಂದ ನೇಮಿಸಲ್ಪಟ್ಟ ಪುರುಷ ಮತ್ತು ಸ್ತ್ರೀಯರನ್ನು ಹೊಂದಿದೆ. ಇವರು ಸೈನಿಕರ ದಿರಿಸು, ಆಯುಧಗಳನ್ನು ಹೊಂದಿದ್ದಾರೆ. ಸಾಮಾನ್ಯ ಪುರುಷರು ಮತ್ತು ಮಹಿಳೆಯರು ೧೮ನೆ ಶತಮಾನದ ಸಮಾಜದಲ್ಲಿ ಧರಿಸುತ್ತಿದ್ದ ಸಾಮಾನ್ಯ ಪಂಚೆ, ಉದ್ದದ ನಿಲುವಂಗಿ, ಮಹಿಳೆಯರು ಕಚ್ಚೆಯೊಂದಿಗಿನ ಸೀರೆ ಧರಿಸಿದ್ದಾರೆ.

ಮೊದಲನೇ ಅಂಕಣದ ಎರಡನೇ ಪಟ್ಟಿಕೆಯಲ್ಲಿ ವಾಸುದೇವ ಮತ್ತು ದೇವಕಿ ಕಾವಲುಗಾರರ ಬಂಧನದಲ್ಲಿ ಬಂಧಿಖಾನೆಯೊಳಗಿದ್ದಾರೆ. ದೇವಕಿಗೆ ಹುಟ್ಟಿದ ಹಲವು ಮಕ್ಕಳನ್ನು ನಿರಂತರವಾಗಿ ಕಂಸನು ಕೊಂದಿದ್ದಾನೆ. ದೇವಕಿಗೆ ಅನೇ ಮಗುವು ಜನನವಾದಾಗ ಕಂಸನು ಆ ಮಗುವನ್ನು ಕೊಲ್ಲಲು ಸಿದ್ಧನಾಗಿರುತ್ತಾನೆ, ಈ ಸಂದರ್ಭದಲ್ಲಿ ಮಗುವಿನ ಜನನ ಪ್ರಮುಖ್ಯತೆಯನ್ನು ಅರಿತ ಹರಿವು, ತಂದೆಯಾದ ವಾಸುದೇವನಿಗೆ ದರ್ಶನ ನೀಡಿ ಮಗುವಿನ ಸುರಕ್ಷತೆಗಾಗಿ ಗೋಕುಲಕ್ಕೆ ತಲುಪಿಸಲು ತಿಳಿಸಿದಾಗ ವಾಸುದೇವನು ತನ್ನ ಅಸಹಾಯಕತೆಯನ್ನು ನೆನೆದು ಕಣ್ಣೀರಿಡುತ್ತಾನೆ. ಭಾಗವತಾ ಪುರಾಣದಲ್ಲಿ ತಿಳಿಸಿರುವಂತೆ ನದಿಯು ವಾಸುದೇವನಿಗೆ ಗೋಕುಲದ ನಂದನವನ್ನು ಭೇಟಿ ಮಾಡಿ ಗಂಡು ಮಗುವನ್ನೇ ಯಶೋಧೆಗೆ ನೀಡಿ, ಅವಳು ಹೆಣ್ಣು ಮಗುವನ್ನು ತಾನು ಪಡೆದು ಮತ್ತೆ ಜೈಲಿಗೆ ಬಂದು ಸೇರುತ್ತಾನೆ. ಮತ್ತೊಂದು ದೃಷ್ಯದಲ್ಲಿ ಕಂಸನು ಅನೇ ಮಗುವನ್ನು ಕೊಲ್ಲಲು ಬಂದು ಆ ಮಗುವನ್ನು ಪಡೆಯಲು ಆ ಮಗುವು ಅವನ ಕೈಯಿಂದ ಮಾಯವಾಗಲು, ಕಂಸನು ಚಿಂತಾಕ್ರಾಂತನಾಗಿ ಅರಮನೆಗೆ ಹಿಂತಿರುಗಿ ತನ್ನ ಮಂತ್ರಿಯೊಂದಿಗೆ ಚರ್ಚೆಯಲ್ಲಿ ತೊಡಗುತ್ತಾನೆ. ಅವರ ಸಲಹೆಯಂತೆ ನಗರದಲ್ಲಿ ಹುಟ್ಟಿದ ಪ್ರತಿಯೊಂದು ನವಜಾತ ಶಿಶುಗಳನ್ನು ಕೊಲ್ಲಲು 'ಪೂತನಿ'ಯನ್ನು ಕಳಿಸುತ್ತಾನೆ.

ಇದೇ ಅಂಕಣದ ಮತ್ತೊಂದು ದೃಶ್ಯವು ಕೃಷ್ಣನ ಬಾಲ್ಯದ ಬೆಳವಣಿಗೆಯ ತುಂಟಾಟಗಳನ್ನು ಚಿತ್ರಿಸುತ್ತದೆ. ಬಾಲಕೃಷ್ಣನು ತನ್ನ ಹಿರಿಯ ಸಹೋದರ ಬಲರಾಮನೊಂದಿಗೆ ಸೇರಿ ಮನೆಯ ಬೆಣ್ಣೆ, ಮೊಸರು, ಹಾಲನ್ನು ಕದಿಯುವ ಇದರಿಂದ ರೋಸಿ ಹೋದ ಯಶೋದೆಯು ಕೃಷ್ಣನನ್ನು ಹಿಡಿದ ದೃಶ್ಯ. ಮೊದಲನೇ ಅಂಕಣದ ಕೊನೆಯ ದೃಶ್ಯವು ಯಮುನಾ ನದಿಯಿಂದ ಕಾಳಿಂಗನನ್ನು ಹೊರದೂಡುವ ಸನ್ನಿವೇಶ, ಕೃಷ್ಣನು ಕಾಳಿಂಗ ಸರ್ಪವನ್ನು ಮರ್ದನ ಮಾಡುತ್ತಿರುವ ಸನ್ನಿವೇಶ, ಕಾಡಿನ ದಳ್ಳುರಿಯಿಂದ ಗೋವುಗಳನ್ನು ಸಂರಕ್ಷಿಸುವ ದೃಷ್ಯ, ಗೋಪಿಕಾಸ್ತ್ರೀಯರು ದೇವತೆಯಾದ ಕಾತ್ಯಾಯಿಣಿಯನ್ನು ಪ್ರಾರ್ಥಿಸುವ ದೃಶ್ಯ, ಗೋಪಿಕಾಸ್ತ್ರೀಯರ ವಸ್ತ್ರಾಭರಣಗಳನ್ನು ಕೃಷ್ಣನು ದೋಚಿರುವಂತೆ ಚಿತ್ರಿಸಿರುವ ಸನ್ನಿವೇಶಗಳು ಕೃಷ್ಣನ ಬಾಲ್ಯ ಜೀವನದ ಪವಾಡಗಳನ್ನು ಹೇಳುತ್ತವೆ.

ಎರಡನೇ ಅಂಕಣವು ಕೃಷ್ಣನ ಪ್ರೌಢ ಬೆಳವಣಿಗೆಯ ಹಂತವನ್ನು ವಿವರಿಸುತ್ತದೆ. ಇಲ್ಲಿ ಕೃಷ್ಣನು ಕಂಸನನ್ನು ಸಂಹರಿಸುವ ದೃಶ್ಯ, ಜರಾ ಸಂದನು ಕೃಷ್ಣನೊಂದಿಗೆ ನೆಡೆಸಿದ ಕಾದಾಟವು ನಾರದನ ಮಧ್ಯಸ್ಥಿಕೆಯಲ್ಲಿ ಕೊನೆಗೊಂಡಿರುವುದು. ಅನಂತರ ಕೃಷ್ಣನು ವಿದರ್ಭದ ರಾಜನ ಮಗಳಾದ ರುಕ್ಮಿಣಿಯನ್ನು ಪ್ರೀತಿಸಿ ಮದುವೆಯಾದದ್ದನ್ನು ಚಿತ್ರಿಸಲಾಗಿದೆ. ಅನಂತರ ಕೃಷ್ಣ ಮತ್ತು ರುಕ್ಮಿಣಿಗೆ ಪ್ರದ್ಯುಮ್ನ ಎಂಬ ಮಗು ಜನಿಸಿರುವ ಸನ್ನಿವೇಶವನ್ನು ಚಿತ್ರಿಸಿದ್ದಾರೆ. ಈ ಮೂಲಕ ಕಲಾವಿದ ದೇವತೆಗಳಿಗೂ ಪ್ರೇಮಕಾಮವು ಹೊರತಂದುದಲ್ಲ ಎಂಬುದನ್ನು ತೋರಿಸಿದ್ದಾನೆ. ಬಾಲಕನಾದ ಪ್ರದ್ಯುಮ್ನನೊಂದಿಗೆ ರುಕ್ಮಿಣಿ ಮತ್ತು ಸತ್ಯಭಾಮೆ ಆಟವಾಡುತ್ತಿರುವ ಸನ್ನಿವೇಶವನ್ನು ಅವನು ಮರೆತಿಲ್ಲ.

ಮೂರನೇ ಅಂಕಣವು ಮಹಾಭಾರತದ ಕಥಾ ವಸ್ತುವನ್ನು ಆಧರಿಸಿದ್ದು. ಯುದ್ಧ ಭೂಮಿಯಲ್ಲಿ ಮುಖಾ ಮುಖಿಯಾಗಿ ಎರಡು ಸೇನೆಗಳು ಯುದ್ಧದಲ್ಲಿ ತೊಡಗಿವೆ. ಅವುಗಳನ್ನು ಕಲಾವಿದ ಕೌರವ ಪಾಂಡವರೆಂದು. ಭಾವಿಸಿದ್ದಾನೆ. ಮಹಾಭಾರತದಲ್ಲಿ ಜನಪ್ರಿಯ ಸನ್ನಿವೇಶವಾಗಿರುವ ಅರ್ಜುನನಿಗೆ ಗೀತೋಪದೇಶವು ಮನೋಗ್ನವಾಗಿ ಚಿತ್ರಿಸಲಾಗಿದೆ. ಇಲ್ಲಿ ಕಲಾವಿದನು ಅಂದು ಚಾಲನೆಯಲ್ಲಿದ್ದ ಕಾಲ್ದಳ, ಅಶ್ವದಳ, ರಥದಳ, ಗಜದಳ ಅವುಗಳ ಮುಖ್ಯಸ್ಥರನ್ನು ತೋರಿಸುವಲ್ಲಿ ಯಶಸ್ವಿಯಾಗಿದ್ದಾನೆ.

ನಾಲ್ಕನೇಯ ಅಂಕಣವು ರಾಮಾಯಣ ಕಾವ್ಯದ ಕಥಾವಸ್ತುವನ್ನು ಆಧರಿಸಿದೆ. ರಾಮ ಮತ್ತು ಅವನ ಸಹೋದರ ಜನನವನ್ನು ಒಂದು ಅಧ್ಯಾಯವಾಗಿ ಪರಿಗಣಿಸಲಾಗಿದೆ. ಮಹಾರಾಜನಾದ ದಶರಥನನ್ನು ವಿಶ್ವಾಮಿತ್ರನು ಸಂಧಿಸುವುದನ್ನು ಕಲಾವಿದನು ಚಿತ್ರದಲ್ಲಿ ಪ್ರತಿನಿಧಿಸಿದ್ದಾನೆ. ವಿಶ್ವಾಮಿತ್ರನು ಶ್ರೇಷ್ಟ ಸಂತನಾಗಿದ್ದು ತಾನು ನೆಡೆಸುತ್ತಿರುವ ಯಾಗಕ್ಕೆ ಕಾಡಿನಲ್ಲಿ ರಾಕ್ಷಸರಿಂದ ಉಂಟಾಗುತ್ತಿರುವ ತೊಂದರೆಗಳನ್ನು ನಿವಾರಿಸಲು ರಾಮ ಮತ್ತು ಅವನ ಸಹೋದರ ಲಕ್ಷ್ಮಣನನ್ನು ತನ್ನೊಂದಿಗೆ ಕಳುಹಿಸುವ ಬೇಡಿಕೆ ಇಡುತ್ತಾ ಇದೇ ಸನ್ನಿವೇಶವು ಕಥಾಸರಣಿಯಂತೆ ಅಂಕಣದ ತುಂಬೆಲ್ಲಾ ಚಿತ್ರಿಸಲ್ಪಟ್ಟಿದೆ. ಮತ್ತೊಂದು ದೃಶ್ಯವು ಸೀತಾ ಸ್ವಯಂ ವರದ ಹಲವಾರು ಸನ್ನಿವೇಷದ ಚಿತ್ರಗಳನ್ನು ಚಿತ್ರಿಸಲಾಗಿದೆ. ಸೀತೆಯೊಂದಿಗೆ ರಾಮನು ಮಿಥಿಲನಗರದ ಪ್ರವೇಶ, ಅವನ ಆಗಮನದಿಂದ ಮಿಥಿಲ ನಗರದ ಸಂಭ್ರಮ, ಪರಶುರಾಮನಿಂದ ರಾಮನ ಪರಾಕ್ರಮದ ಘೋಷಣೆ, ನಂತರದ ದೃಶ್ಯದಲ್ಲಿ ರಾಮನು ಸೀತೆಯೊಂದಿಗೆ ಕಾಡಿನ ಪ್ರವೇಶ, ಸೀತೆಯು ಮಾಯದ ಜಿಂಕೆಯನ್ನು ನೋಡಿ ಆಸೆ ಪಡುವ ಸನ್ನಿವೇಶ ಇದು ಸಾಮಾನ್ಯವಾಗಿ ರಾಮಾಯಣದ ಅರಣ್ಯಕಂಡವಾಗಿದೆ. ಮತ್ತೊಂದು ದೃಶ್ಯದ ಸನ್ನಿವೇಶದಲ್ಲಿ ಕಲಾವಿದನು ರಾಮ ಲಕ್ಷ್ಮಣ ಸೀತೆಯು ಅನುಸೂಯಳನ್ನು ಭೇಟಿ ಮಾಡಿದ್ದು, ಅವಳಿಂದ ವಸ್ತ್ರಾಭರಣಗಳನ್ನು ಪಡೆದದ್ದು ಚಿತ್ರಿಸಿದ್ದಾನೆ. ಈ ಸನ್ನಿವೇಶವು ಕಾಡಿನ ಸಂಕಟದ ಪರಿಸ್ಥಿತಿಯನ್ನು ನೆನಪಿಸುತ್ತದೆ. ರಾವಣನ ಸಹೋದರಿಯಾದ ಶೂರ್ಪಣಕಿ ರಾಮನನ್ನು ಬಯಸಿ ಬಂದು ಶಿಕ್ಷಿಸಲ್ಪಟ್ಟಿದ್ದು, ಅನಂತರ ರಾವಣನಿಂದ ಚಿನ್ನದ ಜಿಂಕೆಯ ಪ್ರವೇಶ, ರಾವಣನ ಪ್ರವೇಶ, ಸೀತೆಯನ್ನು ಹುಡುಕುತ್ತಾ ಹೋದ ರಾಮನಿಗೆ ಶಬರಿಯ ಆತಿಥ್ಯ, ಸುಗ್ರೀವನ ಜೊತೆಯಲ್ಲಿ ಗೆಳೆತನದ ಬಂಧ ಇವಿಷ್ಟು ರಾಮಾಯಣ ಆಧಾರಿತ ಅರಣ್ಯ ಕಾಂಡದ ದೃಶ್ಯಗಳು ಕಥಾಮಾಲಿಕೆಗಳಾಗಿ ರೂಪುಪಡೆದಿವೆ.

ಐದನೇ ಅಂಕಣವು ರಾಮಾಯಣದ ಯುದ್ಧಕಾಂಡ ವಸ್ತು ವಿಷಯವನ್ನು ಒಳಗೊಂಡಿದೆ. ಸೀತೆಯನ್ನು ಹುಡುಕಿ ಹೊರಟ ಹನುಮಂತನಿಗೆ ಲಂಕೆಯಲಿ ದೊರೆತ ಆತಿಥ್ಯದ ಸ್ವರೂಪದೊಂದಿಗೆ ಚಿತ್ರರಚನೆ ಪ್ರಾರಂಭವಾಗಿದೆ. ರಾವಣನ ಕೆಲವು ಸೈನಿಕರು ಹನುಮನ ಬಾಲವನ್ನು ಹಿಡಿದು ರಾವಣನ ಎದುರು ತಂದು ನಿಲ್ಲಿಸಿದ್ದಾನೆ. ಮುಂದುವರೆದ ದೃಶ್ಯದಲ್ಲಿ ಹನುಮನು ಬೃಹದಾಕಾರವಾಗಿ ಬೆಳೆದು ನಿಂತಿದ್ದಾನೆ. ಮೂರನೇ ದೃಶ್ಯವು ಹನುಮನು ಸೀತೆಯಿಂದ ಓಲೇ ಪತ್ರವನ್ನು ಪಡೆಯುತ್ತಿರುವ ಸನ್ನಿವೇಶವು ಪ್ರದರ್ಶಿತವಾಗಿದೆ. ಮತ್ತೊಂದು ದೃಶ್ಯದಲ್ಲಿ ಲಂಕಾಪುರಿಯಿಂದ ಹೊರಟ ಹನುಮಂತನು ತನ್ನ ಗೆಳೆಯರಾದ ಜಾಂಬವಂತ, ಅಂಗದ ಮತ್ತು ಇತರರನ್ನು ಭೇಟಿಮಾಡುತ್ತಿರುವ ಚಿತ್ರವನ್ನು ಚಿತ್ರಿಸಲಾಗಿದೆ. ಕೊನೆಗೆ ದೃಶ್ಯದಲ್ಲಿ ಸುಗ್ರೀವನೊಂದಿಗೆ ಮಧುವನದಲ್ಲಿ ನೆರೆದಿರುವ ಕುಸಮಾಪದ ಸಂಭ್ರಮವನ್ನು ಚಿತ್ರಿಸಲಾಗಿದೆ.

ಇದೇ ಅಂಕಣದ ಮತ್ತೊಂದು ದೃಶ್ಯದಲ್ಲಿ ರಾಮ ಮತ್ತು ಲಕ್ಷ್ಮಣರು, ವಿಭೀಷಣ, ಹನುಮಂತರೊಡಗೂಡಿ ಲಂಕೆಯ ಮೇಲೆ ಯುದ್ಧ ಸಿದ್ಧತೆಗೆ ತಯಾರಿ ನೆಡೆಸಿರುವ ಸಾಗರವನ್ನು ದಾರಿತೋರುವಂತೆ ರಾಮನು ಪ್ರಾರ್ಥಿಸುತ್ತಿದ್ದಾನೆ. ಮತ್ತೊಂದು ದೃಶ್ಯದಲ್ಲಿ ಸಾಗರವು ರಾಮನಿಗೆ ಸಹಕಾರದ ಆಶ್ವಾಸನೆ ನೀಡುತ್ತಿರುವ ಸನ್ನವೇಶವಿದೆ. ಅನಂತರ ಸಾಗರಕ್ಕೆ ಕಪಿ ಸಮೂಹವು ಭಾರೀ ಗಾತ್ರದ ಕಲ್ಲು ಬಂಡೆಗಳೊಂದಿಗೆ ಸೇತುವೆ ನಿರ್ಮಿಸುತ್ತಿದ್ದಾರೆ. ತಮ್ಮ ಸಾಹಸಕ್ಕೆ ಕಪಿ ಸೈನ್ಯವು ಸಂತೋಷದ ಸಂಭ್ರಮದಲ್ಲಿರುವುದನ್ನು ತೋರಿಸಲಾಗಿದೆ. ಇದಕ್ಕೆ ಪ್ರತಿಯಾಗಿ ಲಂಕೆಯಲ್ಲಿ ರಾವಣ ಅವನ ಸಹಚಾರರು ಇದಕ್ಕೆ ಪ್ರತಿತಂತ್ರದ ಸಮಲೋಚನೆಯಲ್ಲಿ ನಿರತರಾಗಿದ್ದಾರೆ. ಹಾಗೂ ಇದಕ್ಕೆ ಪೂರಕವಾಗಿ ಶತ್ರು ಸೈನ್ಯದ ಯುದ್ಧಸಿದ್ಧತೆಯನ್ನು ರಾವಣನು ತನ್ನ ಸಹಾಯಕರಿಂದ ವರದಿ ಪಡೆಯುತ್ತಿದ್ದಾನೆ. ಇದೇ ಅಂಕಣದ ಮತ್ತೊಂದು ದೃಶ್ಯವು ರಾಮನ ಸೈನ್ಯವು ಲಂಕೆಯನ್ನು ಪ್ರವೇಶಿಸಿ ಯುದ್ಧದಲ್ಲಿ ತೊಡಗಿರುವ ಸನ್ನಿವೇಶವು ವಿಸ್ತಾರವಾಗಿ ಮೂಡಿದೆ. ಇದೇ ಅಂಕಣದ ಮಧ್ಯಭಾಗವು ರಾಮ ಪಟ್ಟಾಭಿಷೇಕದ ಕಿರೀಟ ಧಾರಣೋತ್ಸವವಾದ ಸನ್ನಿವೇಶವನ್ನು ಉತ್ಕೃಷ್ಟವಾಗಿ ಚಿತ್ರಿಸಿದೆ. ಬಲಭಾಗದಲ್ಲಿ ರಾಮನೊಂದಿಗೆ ಸೀತೆ ಕುಳಿತಿದ್ದಾಳೆ ರಾಮನಿಗೆ ಎಡಭಾಗದಲ್ಲಿ ಲಕ್ಷ್ಮಣ ಬಲಭಾಗದಲ್ಲಿ ಭರತ ಶತೃಘ್ನರು ನಿಂತಿದ್ದಾರೆ. ರಾಮನ ಪಾದದ ಬಳಿ ಹನುಮನು ಸ್ಥಾನಪಡೆದಿದ್ದಾನೆ. ವಾನರ ಪಡೆ, ವಿಭೀಷಣ ಮಂತ್ರಿಗಳು, ಪುರೋಹಿತರು, ಸಾಮಾನ್ಯ ಜನತೆ ಈ ಸನ್ನಿವೇಶಕ್ಕೆ ಸಾಕ್ಷಿಯಾಗಿದ್ದಾರೆ.

ಆರನೇ ಅಂಕಣವು ಸಹ ಯುದ್ಧಕಾಂಡಕ್ಕೆ ಸಂಬಂಧಿಸಿದ್ದು, ಅಂತಿಮ ಯುದ್ಧದ ಸಂದರ್ಭವನ್ನು ಚಿತ್ರಿಸಿದೆ. ಸೈನಿಕರು, ಯುದ್ಧಾಸ್ತ್ರಗಳೊಂದಿಗೆ ಕುದುರೆ, ಆನೆಗಳ ಜೊತೆಯಲ್ಲಿ ಗುಂಪುಗೂಡಿದ್ದಾರೆ. ರಾಮಲಕ್ಷ್ಮಣರು ಇಂದ್ರಜಿತನೊಂದಿಗೆ ಕಾದಾಡುತಿದ್ದಾರೆ. ಮತ್ತೊಂದು ಕಡೆ ಕುಂಬಕರ್ಣನೊಂದಿಗೆ ಲಕ್ಷ್ಮಣನು ಹೋರಾಡುತ್ತಿದ್ದಾನೆ. ಅಂತಿಮವಾಗಿ ರಾಮನು ರಾವಣನನ್ನು ಸಂಹರಿಸುವ ದೃಶ್ಯವಿದೆ. ಬಹಳಷ್ಟು ಸಂಖ್ಯೆಯಲ್ಲಿ ಬಹಳಷ್ಟು ಕಡೆಯಲ್ಲಿ ವಾನರ ಸೈನಿಕರು ರಾಕ್ಷಕರ ಸೈನಿಕರ ಜೊತೆಯಲ್ಲಿ

ಸೇರಿಹೋಗಿದ್ದಾರೆ. ಇದು ಯುದ್ಧದ ಅಂತಿಮ ಚಿತ್ರಣವನ್ನು ತೋರುತ್ತದೆ. ಇಲ್ಲಿನ ಕೊನೆಯ ದೃಶ್ಯವು ಯುದ್ಧದಲ್ಲಿ ವಿಜಯಶೀಲನಾದ ರಾಮನು ಅಶೋಕ ವನದಲ್ಲಿರುವ ಸೀತೆಯನ್ನು ಭೇಟಿಯಾಗುವ ಸನ್ನಿವೇಶವಾಗಿದೆ.

ಏಳನೇ ಅಂಕಣವು ನರಸಿಂಹ ಪುರಾಣದ ವಸ್ತು ವಿಷಯವನ್ನು ಒಳಗೊಂಡಿದೆ. ಈ ಅಂಕಣವು ಸಂಪೂರ್ಣವಾಗಿ ನರಸಿಂಹ ಲಕ್ಷ್ಮಿಯೊಂದಿಗೆ ಅವನ ವಿವಾಹ ಸಂದರ್ಭದ ಚಿತ್ರಣವಾಗಿದೆ. ಇದೇ ಕಥಾವಸ್ತುವನ್ನು ಒಳಗೊಂಡಂತೆ ನರಸಿಂಹನ ವಿವಿಧ ಅವತಾರದ ನಮೂನೆಗಳನ್ನು ಇಲ್ಲಿ ಪ್ರತಿನಿಧಿಸಲಾಗಿದೆ. ಉದಾಹರಣೆಗೆ ಲಕ್ಷ್ಮಿ ನರಸಿಂಹ ಶೇಷಾಸನದ ಮೇಲೆ ಆಸೀನನಾಗಿರುವ ಯೋಗ ನರಸಿಂಹ, ವರಹಾ ನರಸಿಂಹ ಹಾಗೂ ದಶಬುಜು ನರಸಿಂಹ ಅವತಾರಗಳ ಚಿತ್ರಣವಿದೆ. ಮಧ್ಯದ ಅಂಕಣವು ಅತಿ ಎಚ್ಚರಿಕೆಯಿಂದ ರೂಪಿಸಲಾಗಿದೆ. ಅಲಂಕಾರ ಚಿತ್ರಣದ ಮೂರು ಕಮಾನುಗಳ ಮಧ್ಯಭಾಗದಲ್ಲಿ ನರಸಿಂಹನು ಹಾಸೀನನಾಗಿದ್ದಾನೆ. ದೇವತೆಯು ಚತುರ್ಭುಜದೊಂದಿಗೆ ಚಿತ್ರಿಸಿದೆ. ಮೇಲ್ಮುಖವಾದ ಎರಡು ಕೈಗಳು ಶಂಕ ಮತ್ತು ಚಕ್ರಗಳನ್ನು ಹೊಂದಿದೆ. ಕೆಳಮುಖವಾಗಿ ಇಳಿಬಿಟ್ಟಿರುವ ಬಲಕೈ ವರದಾ ಮುದ್ರಾಕಾರದಲ್ಲಿದೆ. ಎಡಗೈ ಲಕ್ಷ್ಮಿಯನ್ನು ಆಲಂಗಿಸಿದೆ. ನರಸಿಂಹನಿಕೆ ವಿಪುಲವಾದ ದುಂಡುಕಣ್ಣುಗಳಿದ್ದು ಮುಖದಲ್ಲಿ ಮಂದಹಾಸವಿದೆ. ಶ್ರೇಷ್ಠವಾದ ಆಭರಣಗಳನ್ನು ಧರಿಸಿದ್ದಾನೆ. ಅಷ್ಟೇ ಅಲಂಕೃತಳಾದ ಲಕ್ಷ್ಮಿಯು ಆಸೀನಳಾಗಿರುವ ಸಂಯೋಜನೆಯು ಉತ್ತಮವಾಗಿ ಆಸೀನಳಾಗಿರುವ ಸಂಯೋಜನೆಯು ಉತ್ತಮವಾಗಿ ಚಿತ್ರಿಸಲಾಗಿದೆ. ಅವಳ ಬಲಗೈ ಕಮಲವನ್ನು ಇಡಿದಿದೆ. ಇನ್ನೊಂದು ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರು ನರಸಿಂಹನನ್ನು ನೋಡುತ್ತಿರುವಂತೆ ಚಿತ್ರಿಸಲಾಗಿದೆ. ನರಸಿಂಹನ ಬಲಭಾಗದಲ್ಲಿ ಬ್ರಹ್ಮದೇವನನ್ನು, ಎಡಭಾಗದಲ್ಲಿ ಪಾರ್ವತಿ ಮತ್ತು ಗಂಗೆಯ ಜೊತೆಯಲ್ಲಿರುವ ಶಿವನನ್ನು ಸಂಯೋಜನೆಗೊಳಿಸಲಾಗಿದೆ. ಬ್ರಹ್ಮನ ಜೊತೆ ಹಂಸವು ಶಿವನ ಜೊತೆ ನಂದಿಯು ಚಿತ್ರಿಸಲ್ಪಟ್ಟಿವೆ. ಈ ಮುಖ್ಯ ಸನ್ನಿವೇಶದ ತಳಭಾಗದಲ್ಲಿ ಹನುಮಂತ ತುಂಬುರ, ನಾರದ, ಪುರೋಹಿತರು, ಋಷಿ ಮುನಿಗಳ ಚಿತ್ರಣವಿದ್ದು ಇವರೆಲ್ಲರು ನರಸಿಂಹ ದೇವತೆಗೆ ಶುಭ ಹಾರೈಸುತ್ತಿರುವಂತೆ ಸಂಯೋಜನೆಯು ರೂಪಿಸಲ್ಪಟ್ಟಿದೆ.

ಎಂಟನೇ ಅಂಕಣವು ಚೌಕಕಾರವಾಗಿದ್ದು ವಿಷ್ಣು ಪುರಾಣಾದ ಕಥಾವಸ್ತುವನ್ನು ಆಧರಿಸಿದೆ. ಚೌಕಾರದ ಅಂಕಣವನ್ನು ಪೂರ್ಣ ಪ್ರಮಾಣದಲ್ಲಿ ಆವರಿಸಿರುವಂತೆ ವಿಷ್ಣುವಿನ ವಿಶ್ವರೂಪವನ್ನು ಚಿತ್ರೀಕರಿಸಲಾಗಿದೆ. ಉಳಿದ ಸ್ಥಳಾವಾಕಾಶವನ್ನು ಸುಮಾರು ಇಪ್ಪತ್ತು ಸಣ್ಣ ಚೌಕಟ್ಟುಗಳನ್ನು ವಿಂಗಡಿಸಿಕೊಂಡು ವಿಶ್ವರೂಪದ ವಿವಿಧ ಅವತಾರಗಳನ್ನು ಒಂದೊಂದು ಚೌಕಟ್ಟಿನಲ್ಲಿ ಬಿಡಿಸಲಾಗಿದೆ. ಇಲ್ಲಿರುವ ಇಡೀ ದೇವಾಲಯದಲ್ಲಿರುವ ವರ್ಣ ಚಿತ್ರಗಳಿಗಿಂತ ಶ್ರೇಷ್ಠ ಮಟ್ಟದಲ್ಲಿ ಇಲ್ಲಿನ ಸನ್ನಿವೇಶವು ಶೈಲಿ ತಂತ್ರಗಳಲ್ಲಿ ಭಿನ್ನವಾಗಿದೆ. ವಿಷ್ಣುವು ಚತುರ್ಭಜ ಭೂಶಿತನಾಗಿ ನಿಲ್ಲಿಸಿರುವಂತೆ ಚಿತ್ರಿಸಲಾಗಿದೆ. ಮೇಲ್ಮುಖವಾಗಿರುವ ಎರಡೂ ಕೈಗಳಲ್ಲಿ ಶಂಕ ಚಕ್ರಗಳಿದ್ದರೆ, ಕೆಳಮುಖವಾಗಿರುವ ಎರಡು ಕೈಗಳು ವರದ ಅಭಯ ಮುದ್ರಾಕಾರದಲ್ಲಿವೆ. ವಿಷ್ಣುವಿನ ಈ ದೃಶ್ಯವು ಸಾಮಭಂಗದಲ್ಲಿದೆ ವಿಷ್ಣುವಿನ ದೇಹದ

ಮಧ್ಯಭಾಗದಲ್ಲಿ ಏಳು ವೃತ್ತಗಳು ಚಿತ್ರಿಸಲ್ಪಟ್ಟಿದ್ದು ಇಡೀ ಜಗತ್ತು ತನ್ನ ಅಧೀನ ಎಂಬುದನ್ನು ಪ್ರತಿನಿಧಿಸುತ್ತದೆ. ವಿಷ್ಣುವಿನ ಎಡ ಮತ್ತು ಬಲಭಾಗದಲ್ಲಿ ನಾರದ, ತುಂಬುರ, ವಿಭಿನ್ನ ಮಾದರಿಯಲ್ಲಿ ನಿಂತಿರುವಂತೆ ಋಷಿಮುನಿಗಳು, ಋಷಿಗಳು, ರಾಕ್ಷಸರು, ಪರಿಚಾರಕರು ಮತ್ತು ಇತರೆ ದೇವತೆಗಳನ್ನು ಚಿತ್ರಿಸಿದೆ. ವಿಷ್ಣುವಿನ ಈ ಪ್ರಧಾನ ಚಿತ್ರದ ಸುತ್ತಲೂ ಭಿನ್ನ ನಮೂನೆಯಲ್ಲಿರುವ ವಿಷ್ಣುವಿನ ವಿವಿಧ ರೂಪಗಳನ್ನು ಬಿಡಿಸಲಾಗಿದೆ. ಮೊದಲಿಗೆ ಮೋಹಿಸಿಯ ಜೊತೆಯಲ್ಲಿ ನರ್ತಿಸುತ್ತಿರುವ ದೇವತೆ. ಶ್ರೀನಿವಾಸ, ನಾರಾಯಣ, ಪಾಂಡುರಂಗ, ವರಹಾಸ್ವಾಮಿ, ಗೋಪಿಕೆಯರೊಂದಿಗಿರುವ ಕೃಷ್ಣ, ತ್ರಿವಿಕ್ರಮ, ಗಜೇಂದ್ರ ಮೋಕ್ಷ, ವಟಪುತ್ರಸಾಯಿ, ಕೂರ್ಮ ಅವತಾರ, ಮತ್ಸ್ಯ ಅವತಾರ, ಸಮುದ್ರಮಥನ, ನರಸಿಂಹ, ರಾಮ, ವಾಮನ ಮತ್ತು ಬಲರಾಮನ ಚಿತ್ರಗಳು ಅಲಂಕಾರಿಕೆ ಸಣ್ಣ ಚೌಕಟ್ಟುಗಳೊಳಗೆ ಚಿತ್ರಿಸಲ್ಪಟ್ಟಿವೆ.

ವೈಷ್ಣವ ಧರ್ಮದ ಹಿನ್ನೆಲೆಯಲ್ಲಿನ ಭಿತ್ತಿ ಚಿತ್ರಗಳಲ್ಲಿ ಬರುವ ರಾಣಿಯರು, ದೇವಾನು ದೇವತೆಗಳು, ಮೈಸೂರು ಶೈಲಿಯಲ್ಲಿ ವೇಷ ಭೂಷಿತವಾಗಿರುವುದನ್ನು ಕಾಣಬಹುದು. ಮೈಸೂರು ಅರಸರ ಆಳ್ವಿಕೆಯ ಕಾಲದಲ್ಲಿ ಪ್ರಚಲಿತವಿದ್ದ ಕೇಶ ವಿನ್ಯಾಸವನ್ನು ಇಲ್ಲಿನ ಚಿತ್ರಗಳಲ್ಲಿ ಗುರುತಿಸಬಹುದು. ಮಹಿಳೆಯರ ಕಣ್ಣುಗಳು ಕಿವಿ ಭಾಗದವರೆಗೆ ಚಾಚಿರುವಂತೆ ಚಿತ್ರಿಸಿರುವಿಕೆ ಮುಖ ಮೈ ಚರ್ಮದ ಬಣ್ಣವನ್ನು ತಿಳಿಕೆಂಪು, ಕಂದುಬಣ್ಣ, ತಿಳಿಕಂದುಬಣ್ಣ, ಬಿಳಿ ಮತ್ತು ನೀಲಿ ಲೇಪಿತವಾಗಿದೆ. ಸಾಮಾನ್ಯವಾಗಿ ವಿಷ್ಣು ಮತ್ತು ಕೃಷ್ಣ ಆಕಾಶ ನೀಲಿಯಲ್ಲಿ ಚಿತ್ರಿಸಿವೆ. ಇವರು ಸಾಮಾನ್ಯವಾಗಿ ವಿರಾಜರಮಾನ ಸಮಸ್ಥಿತಿಯ ಸನ್ನಿವೇಶದಲ್ಲಿರುವಂತೆ ರೂಪಿಸಲ್ಪಟ್ಟಿವೆ. ಸಾಮಾನ್ಯವಾಗಿ ವೈಷ್ಣವ ಧರ್ಮಿಯರು ಅನುಸರಿಸುವಂತೆ ತುರುಬುಗಳು ಮೇಲೆತ್ತಿ ಗಂಟುಮಾಡಿ ಉಳಿದ ಕೇಶವನ್ನು ಇಳೆಬಿಟ್ಟಿರುವಂತೆ ಚಿತ್ರಿಸಿದೆ. ಆಭರಣಗಳ ಮತ್ತು ವಸ್ತ್ರಗಳು ದೇಹದ ಅಲಂಕಾರದಲ್ಲಿ ಪಾತ್ರವಹಿಸಿವೆ. ಬಿಳಿಬಣ್ಣವು ಪಾರದರ್ಶಕ ದವಣಿಗಳಿಂದ ಅಲಂಕರಿಸಲಾಗಿದೆ. ಗಲ್ಲ, ಮೂಗು, ತುಟಿ, ಕಿವಿಭಾಗ ಕಾಣಿಸಲು ಬಾಹ್ಯರೇಖೆಗಳನ್ನು ಒತ್ತಾಗಿ ಎಳೆಯಲಾಗದೆ. ಇವೆಲ್ಲ ಪ್ರಚಲಿತವಿದ್ದ ಮೈಸೂರು ಶೈಲಿಯ ಲಕ್ಷಣವನ್ನು ಹೋಲುತ್ತವೆ.

ಕೆರೆಗೋಡಿನ ಶಂಕರೇಶ್ವರ ದೇವಾಲಯದ ಭಿತ್ತಿಯಲ್ಲಿ ಶೈವ ಪುರಾಣದ ಚಿತ್ರಗಳು ಅತಿಹೆಚ್ಚಾಗಿದ್ದು ಕೆಲವೇ ಚೌಕಟ್ಟುಗಳಲ್ಲಿ ವೈಷ್ಣವ ಧರ್ಮದ ಭಿತ್ತಿ ಚಿತ್ರಗಳಿವೆ. ಸಾಮಾನ್ಯವಾಗಿ ವೈಷ್ಣವ ಧರ್ಮದ ಕಥಾವಸ್ತುವು ಒಂದೇ ಆಗಿರುವುದರಿಂದ ಚಿತ್ರಗಳ ಚಿತ್ರಣವೇನು ಬೇರೆಯಾಗಿಲ್ಲ ಸೀತಾರಾಮ ಕಲ್ಯಾಣ, ರಾಮಪಟ್ಟಾಭಿಷೇಕದ ದೃಶ್ಯವನ್ನು ದೊಡ್ಡದಾಗಿ ರಚಿಸಿದ್ದು ಸುತ್ತಲಿನ ಚಿಕ್ಕ ಅಂಕಣಗಳಲ್ಲಿ ವಿಶ್ವಾಮಿತ್ರನಲ್ಲಿ ರಾಮಲಕ್ಷ್ಮಣರ ಅಭ್ಯಾಸ, ಅಹಲ್ಯೋಧ್ಧಾರಣೆ, ಸೀತಾಪರಹರಣ, ವಾಲಿನಿಗ್ರಹಣ, ಜಲಾಯು, ರಾಮರಾವಣರಯುದ್ಧ, ಅಶೋಕವನದಲ್ಲಿ ಸೀತೆ ಇತ್ಯಾದಿ ಚಿತ್ರಗಳಿವೆ. ಮತ್ತೊಂದೆಡೆ ಶ್ರೀದೇವಿ, ಭೂದೇವಿ ಸಮೇತ ವಿಷ್ಣುವಿದ್ದು. ಸುತ್ತಲಿನ ಅಂಕಣಗಳಲ್ಲಿ ದಶಾವತಾರವನ್ನು ಚಿತ್ರಿಸಿದೆ. ಇಲ್ಲಿನ ಶೈಲಿ ಮೈಸೂರು ಶೈಲಿಯದಾಗಿರದೆ ಜನಪರ ಜನಪದ ಶೈಲಿಗೆ ಸ್ಥಿತ್ಯಂತರಗೊಂಡಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು.

ಕೆರೆಗೋಡಿಗೆ ಹತ್ತಿರದಲ್ಲೇ ಇರುವ ರಂಗಾಪುರದಲ್ಲಿಯೂ ವಿಷ್ಣುವಿನ ಕಲ್ಯಾಣದ ದೃಶ್ಯಗಳು ದಶಾವತಾರದ ಹಾಗೂ ಚಿತ್ರಗಳನ್ನು ಕಾಣಬಹುದಾಗಿದೆ. ದೇವಾಲಯದಲ್ಲಿ ಒಂದೇ ಅಂಕಣದಲ್ಲಿ ಚಿತ್ರವಿದ್ದು ವಿಷ್ಣುವಿನ ದಶಾವತಾರ ಚಿತ್ರಕ್ಕೆ ಈ ಅಂಕಣವನ್ನು ಮೀಸಲಿಟ್ಟಿದ್ದಾರೆ. ಈ ಅಂಕಣದ ಮಧ್ಯಭಾಗದಲ್ಲಿ ಚನ್ನಕೇಶವನ ಜೊತೆ ಶ್ರೀದೇವಿ ಭೂ ದೇವಿಯರ ಚಿತ್ರವನ್ನು ಪ್ರಧಾನವಾಗಿ ಚಿತ್ರಿಸಿದ್ದು, ಈ ಚಿತ್ರದ ಸುತ್ತಲಿನ ಸ್ಥಳವನ್ನು ವಿಷ್ಣುವಿನ ದಶಾವತಾರವನ್ನು ಚಿಕ್ಕ ಚಿಕ್ಕ ಅಂಕಣದಲ್ಲಿ ಚಿತ್ರಿಸಲಾಗಿದೆ. ಇಲ್ಲಿನ ಮತ್ತೊಂದು ವಿಶೇಷವೆಂದರೆ ದಶಾವತಾರ ಚಿತ್ರದಲ್ಲಿ ಬಲರಾಮ ಮತ್ತು ಬುದ್ಧನ ಚಿತ್ರವನ್ನು ಚಿತ್ರಿಸಿರುವುದು ಇಲ್ಲಿನ ವಿಶೇಷವಾಗಿದೆ. ಈ ಚಿತ್ರಗಳು ಮೈಸೂರು ಸಂಪ್ರದಾಯಿಕ ಶೈಲಿಯಲ್ಲಿದ್ದು ಸುತ್ತಲಿನ ಚೌಕಟ್ಟುಗಳನ್ನು ಹೂ ಬಳ್ಳಿಗಳಿಂದ ಅಲಂಕರಿಸಲಾಗಿದೆ.

ಬೆನಕನಕೆರೆಯ ಗರ್ಭಗುಡಿಯ ಬಲಬದಿಯಿಂದ ಆರಂಭಿಸಿ ದಶಾವತಾರ ರಾಮ ಲಕ್ಷ್ಮಣ ಸೀತೆಯರು ಅರಣ್ಯದಲ್ಲಿರುವುದು, ಜಿಂಕೆಯ ರೂಪು ತಳೆದಿರುವ ಮಾರಿಂಚನನ್ನು ಸೀತೆ ಬಯಸುತ್ತಿರುವುದು, ಲಕ್ಷ್ಮಣನು ರೇಖೆ ಎಳೆದು ಅದನ್ನು ದಾಟಿ ಬರದಂತೆ ತಿಳಿಹೇಳುತ್ತಿರುವುದು, ರಾವಣನು ಸನ್ಯಾಸಿಯಾಗಿ ಬಂದು ಅಪಹರಿಸಿ ಹೊರಟಿರುವುದು, ಜಟಾಯು ರಾವಣನಿಗೆ ಸೀತೆಯನ್ನು ಅಪಹರಿಸಿದಂತೆ ತಡೆಗಟ್ಟುವುದು, ರಾವಣನ ಜಟಾಯುವಿನ ರೇಕ್ಕೆಯನ್ನು ಕತ್ತರಿಸಿರುವುದು, ರಾಮಲಕ್ಷ್ಮಣರಿಗೆ ಜಟಾಯು ಸೀತೆ ಹೋದ ಮಾರ್ಗ ತೋರಿಸುತ್ತಿರುವುದು, ಋಷಿಯ ಮೂಕ ಪರ್ವತದಲ್ಲಿ ರಾಮಲಕ್ಷ್ಮಣರು ಹನುಮಂತ ಸುಗ್ರೀವರಿಗೆ ವಿಷಯ ತಿಳಿಸುತ್ತಿರುವುದುಯ ವಾಲಿಸುಗ್ರೀವರ ಯುದ್ಧ ಹನುಮಂತ ತಾಟಕಿಯರ ಬಳಗ, ಹನುಮಂತರ ಸಾಗರೋಲಂಘನೆ, ಲಂಕಾದಹನ, ಸೀತೆಯಿಂದ ಮುದ್ರೆಯುಂಗುರ ಪಡೆಯುವಿಕೆ. ರಾಮರಾವಣರ ಯುದ್ಧ, ರಾವಣನ ಸಾವು, ರಾಮಪಟ್ಟಾಭಿಷೇಕ ಇವೇ ಮೊದಲಾದ ದೃಶ್ಯಗಳನ್ನು ಜನಪದ ಶೈಲಿಯಲ್ಲಿ ಚಿತ್ರಿಸಲಾಗಿದೆ.

ಮಿಂಚುಕಲ್ಲು ಗೊಲ್ಲಹಳ್ಳಿಯ ಹನುಮಂತ ದೇವಾಲಯದಲ್ಲಿ ಮೂರು ಅಡಿ ಉದ್ದ ಎರಡು ಅಡಿ ಅಗಲದ ಭಾಗದಲ್ಲಿ ದಶಾವತಾರಗಳಿಗೆ ಸಂಬಂಧಿಸಿದ ಕೆಲವೇ ಚಿತ್ರಗಳನ್ನು ಹಾಗೂ ದಶಾವತಾರಗಳಲ್ಲಿ ಬುದ್ಧನ ಚಿತ್ರವಿರುವುದನ್ನು ಅ.ಲ.ನರಸಿಂಹನ್ ರವರು ಗುರುತಿಸಿರುವುದು ತಿಳಿದುಬಂದರೂ ಅಲ್ಲಿನ ನನ್ನ ಕ್ಷೇತ್ರಕಾರ್ಯದಲ್ಲಿ ಅಂತಹ ಯಾವ ಕುರುಹುಗಳು ಕಾಣದಿರುವುದು ಚಿತ್ರಕಲೆಯ ಬಗೆಗಿನ ನಮ್ಮ ನಿರ್ಲಕ್ಷ್ಯಕ್ಕೆ ನಿದರ್ಶನವಾಗಿದೆ.

ಸಿರಾದ ಕಾಳಿದಾಸ ನಗರದಲ್ಲಿನ ರೇವಣಸಿದ್ದೇಶ್ವರ ಸ್ವಾಮಿ ದೇವಾಲಯದಲ್ಲಿ ಗರ್ಭಗುಡಿಯ ದ್ವಾರದ ಇಕ್ಕೆಲಗಳ ಗೋಡೆಯಲ್ಲಿ ಚಿತ್ರಗಳಿದ್ದು, ಅಳಿದುಳಿದಿರುವ ಕೆಲವು ಚಿತ್ರಗಳು ವೈಷ್ಣವ ಧರ್ಮದ ರಾಮಾಯಣ ಮತ್ತು ಭಾಗವತ ಪುರಾಣಗಳಲ್ಲಿನ ಕಥೆಯನ್ನು ಆಧರಿಸಿದ ಚಿತ್ರಗಳಾಗಿವೆ. ಗರ್ಭಗುಡಿಯ ಬಲಭಾಗದಲ್ಲಿ ಗೋಪಿಕೆಯರ ವಸ್ತ್ರಾಪಹರಣ ಚಿತ್ರವಿದ್ದು, ಗೋಪಿಯರು ಜಲಕ್ರೀಡೆಯಾಡುವ ಸಂದರ್ಭದಲ್ಲಿ ಕೃಷ್ಣನು ಅವರ ವಸ್ತ್ರಗಳನ್ನು ಕದ್ದು ಮರದ ಮೇಲೆ ವಿರಾಜಿಸುತ್ತಿದ್ದು, ಗೋಪಿಕೆಯರು

ವಸ್ತ್ರಗಳನ್ನು ಕೈ ಮುಗಿದು ಬೇಡುತ್ತಿರುವುದು, ಇಲ್ಲಿ ಗೋಪಿಕೆಯರು ನೀರಿನಿಂದ ಹೊರಗದೆ ಬಂದು ಸಾಲಾಗಿ ವಿವಿಧ ಭಂಗಿಯಲ್ಲಿ ನಿಂತು ಕೆಲವರು ಎರಡೂ ಕೈಗಳನ್ನು ಮೇಲೆತ್ತಿ ನಮಸ್ಕರಿಸಿ ಕೇಳಿಕೊಳ್ಳುತ್ತಿದ್ದಾರೆ. ಒಬ್ಬರು ತನ್ನ ದೇಹ ಸೌಂದರ್ಯವನ್ನು ಮುಚ್ಚಿಕೊಳ್ಳಲು ಮರವನ್ನೇ ಏರುವ ಪ್ರಯತ್ನದಲ್ಲಿದ್ದಾಳೆ, ಈ ಸ್ತ್ರೀಯರ ಮೈ ಮೇಲೆ ಒಂದು ಚೂರೂ ಬಟ್ಟೆಯನ್ನು ತೋರದೆ ಕೈ ಬಳೆ, ತೋಳಬಂದಿ, ಕಾಲ್ಗೆಜ್ಜೆ, ಕಿವಿಯೋಲೆ, ತುರುಬು, ಮೂಗುತಿ, ಜಡೆಬಿಲ್ಲೆ, ಬೈತಲೆಬೊಟ್ಟು, ಕಂಠೀಹಾರ ಹೀಗೆ ಮುಂತಾದ ಅಲಂಕಾರ ಚಿನ್ನಾಭರಣಗಳನ್ನು ಮಾತ್ರ ಚಿತ್ರಿಸಿದ್ದಾನೆ. ಸ್ತ್ರೀಯರು ನಾಟ್ಯದ ಹಲವು ಬಂಗಿಯಲ್ಲಿ ನಿಂತ ಹಾಗೆ ಕಲಾವಿದ ಚಿತ್ರಿಸಿದ್ದಾನೆ. ಮರದ ಮೇಲೆ ಗೋಪಾಲನು ಪ್ರಸನ್ನನಾಗಿ ಕೈಯಲ್ಲಿ ಹೂ ಹಿಡಿದು ಮಂದಸ್ಮಿತನಾಗಿದ್ದಾನೆ. ಮರವು ಹಲವಾರು ಹೂಗಳಿಂದ ಕೂಡಿದೆ. ಜೊತೆಗೆ ಸುಂದರವಾದ ಗಿಳಿಗಳು ಹಾರಾಡುತ್ತಿವೆ. ಗಿಳಿ, ಮರ ಅಲಂಕಾರಿಕ ಮಾದರಿಯಲ್ಲಿ ಚಿತ್ರಿಸಲಾಗಿದೆ. ಜಲಚರ ಪ್ರಾಣಿಗಳಾದ ಮೀನು, ಏಡಿ, ನೀರಾವು, ಆಮೆ ಹಾಗೂ ಜಲಕನ್ಯೆಯರಿಂದ ಕೂಡಿದೆ.

ಇದೇ ಚಿತ್ರದ ಪಕ್ಕದಲ್ಲಿ ಅಭಯಾಸ್ತ ಹನುಮಂತನ ಚಿತ್ರವು ವಿಶೇಷವಾಗಿದೆ. ಹನುಮಂತನು ಬಲಗೈ ಅಭಯಾಸ್ತದಿಂದ ಎಡಗೈ ಹೂ ಹಿಡಿದು ರಾಕ್ಷಸನೊಬ್ಬನ ಸಂಹರಿಸಿ ಜಯಗಳಿಸಿರುವ ಅಥವಾ ಪ್ರಸನ್ನನಾಗಿರುವ ಚಿತ್ರವಿದೆ. ಇದರ ತಲೆಯ ಮೇಲೆ ವಿಷ್ಣುವಿನ ದಶಾವತಾರದ ಚಿತ್ರಗಳನ್ನು ಸಾಲಾಗಿ ಚಿತ್ರಿಸಲಾಗಿದೆ.

ಗರ್ಭಗೃಹದ ಬಲಕ್ಕಿರುವ ಗೋಡೆಯ ಮೇಲೆ ರಾಮ ಸೀತೆಯರ ಚಿತ್ರಣವಿದೆ. ರಾಮನು ಸರ್ವಾಲಂಕಾರ ಭೂಷಿತನಾಗಿ ಪೀಠದ ಮೇಲೆ ಕುಳಿತಿದ್ದಾನೆ. ತನ್ನ ತೊಡೆಯ ಮೇಲೆ ಸರ್ವಾಲಂಕಾರ ಭೂಷಣಳಾಗಿ ಸೀತೆಯು ಕುಳಿತಿದ್ದು, ರಾಮನ ಪಾದದ ಕೆಳಗೆ ಹನುಮಂತನ್ನು ಎರಡೂ ಕೈಗಳನ್ನು ಜೋಡಿಸಿ ಕುಳಿತಿದ್ದಾನೆ. ಅದೇ ಸಾಲಿನಲ್ಲಿ ಕಪಿಸೈನ್ಯವು ರಾಮನಿಗೆ ನಮಿಸುತ್ತಾ ನಿಂತಿದ್ದಾರೆ. ಬಲಬದಿಯಲ್ಲಿ ಲಕ್ಷ್ಮಣನಿದ್ದಾನೆ. ಸುಗ್ರೀವ, ವಾನರರು ಹಾಗೂ ದೇವಾನುದೇವತೆಯರು ಉಪಸ್ಥಿತರಿದ್ದಾರೆ. ಇದರ ಪಕ್ಕದಲ್ಲಿ ಗರುಡನ ಚಿತ್ರವಿದೆ. ಗರುಡನು ಬಲಗೈಯಲ್ಲಿ ಸರ್ಪವನ್ನು ಹಿಡಿದು ಎಡಗೈ ಅಭಯಾಮುದ್ರೆಯಲ್ಲಿದೆ. ಕಿರೀಟ ಸಮೇತನಾದ ಗರುಡನು ಮೈ ತುಂಬ ಆಭರಣಗಳಿಂದ ಅಲಂಕರಿಸಿಸಲಾಗಿದೆ. ಈ ಚಿತ್ರವು ಪಾರ್ಶ್ವ ಮುಖವುದ್ದಾಗಿದೆ. ಇದಾದ ನಂತರ ಚತುರ್ಭುಜದ ವೇಣುಗೋಪಾಲನ ಚಿತ್ರವಿದೆ. ಕೃಷ್ಣನು ಸರ್ವಾಲಂಕಾರ ಭೂಸಿತನಾಗಿ ನಾಲ್ಕು ಕೈಗಳಿಂದ ಕೊಳಲನ್ನು ಹಿಡಿದಿದ್ದು ಶಂಕ ಚಕ್ರದರನಾಗಿ ಮಂದಹಾಸ ಬೀರುತ್ತದೆ. ಒಂಟಿಕಾಲಿನ ಭಂಗಿಯಲ್ಲಿ ನಿಂತಿದ್ದಾನೆ. ಈ ಚಿತ್ರವು ಕೃಷ್ಣನ ಇಕ್ಕೆಲಗಳಲ್ಲಿ ಸಖಿಯರು ಮೊಸರು ಗಡಿಗೆಯನ್ನು ಹೊತ್ತು ನಿಂತಿದ್ದಾರೆ. ಒಂದು ಭಾಗದಲ್ಲಿ ಮಾತ್ರ ಗೋಪಾಲನ ಗೆಳೆಯನಿದ್ದಾನೆ. ಈ ಚಿತ್ರವನ್ನು ಕಲಾವಿದನು ಸಂಯೋಜನೆಯ ದೃಷ್ಠಿಯಿಂದ ಹೊಂದಿಸಲಾಗಿದೆ ಎಂದು ತೋರುತ್ತದೆ. ಕೃಷ್ಣನ ಹಿಂಬದಿಯಲ್ಲಿ ಕಾಮದೇನು ಹಾಗೂ ಹಲವಾರು ಗೋವಿನಗಳಿಂದ ಕೂಡಿದ ಅವುಗಳು ಗೋವಿಂದನ ಕೊಳನಾದಕ್ಕೆ ತಲೆದೂಗಿದಂತೆ ಚಿತ್ರಿಸಿದ್ದಾನೆ.

ನಂತರದ ಚಿತ್ರವು ಉಗ್ರನರಸಿಂಹನ ಚಿತ್ರವನ್ನು ರಚಿಸಲಾಗಿದೆ. ನರಸಿಂಹನು ಎಂಟು ಕೈಗಳನ್ನು ಹೊದಿದ್ದು ಶಂಕ, ಚಕ್ರ ಮತ್ತು ಪಾಶಾಂಕುರಯಿಡಿದ್ದಾನೆ ನರಸಿಂಹನು ಭಕ್ತ ಪ್ರಹ್ಲಾದನ ಕರೆಗೆ ಹೋಗೊಟ್ಟು ಕಂಬದಿಂದ ಉದ್ಭವಿಸಿ ಉಗ್ರಸ್ವರೂಪದ ತಾಳಿದ್ದಾನೆ. ಇವನ ಎರಡೂ ಕಡೆಯಲ್ಲೂ ಭಕ್ತ ಪ್ರಹ್ಲಾದ ಮತ್ತು ತಾಯಿ ಗಯಾದು ಭಕ್ತಿಯಿಂದ ಕೈ ಮುಗಿದು ನಿಂತಿದ್ದಾರೆ. ಕಲಾವಿದನು ನರಸಿಂಹನ ಚಿತ್ರದ ಹಿಂದೆ ಜ್ವಾಲೆಯ ಪ್ರಖರತೆಯನ್ನು ತೋಸಿರಿ ಸಂಕೇತವಾಗಿ ಪಕ್ಕದಲ್ಲಿ ಒಂದು ಸಣ್ಣ ಕಂಬವನ್ನು ಚಿತ್ರಿಸಿದ್ದಾನೆ. ಪ್ರತ್ಯೇಕ ಕಮಾನಿನಲ್ಲಿ ಎರಡೂ ಮೂಲೆಗಳನ್ನು ಹೂ ಬಳ್ಳಿಗಳಿಂದ ಅಲಂಕರಿಸಲಾಗಿದೆ.

ಹೆಬ್ಬೂರಿನ ವೇಣುಗೋಪಾಲ ದೇವಾಲಯವು ವೈಷ್ಣವ ಧರ್ಮದ ಭಿತ್ತಿಚಿತ್ರಗಳಿಂದ ಕೂಡಿದ್ದೂ ರಾಮ, ವಿಷ್ಣು, ಸರಸ್ವತಿ, ಗಣೇಶ, ಜಯ ವಿಜಯರ ಚಿತ್ರಗಳನ್ನು ಚಿತ್ರಿಸಲಾಗಿದೆ. ಅವುಗಳು ಈಗಾಗಲೇ ಅವಸಾನದಲ್ಲಿರುವುದರಿಂದ ಅವುಗಳ ಬಣ್ಣ ಹಾಗೂ ಆಕಾರವೇ ತಿಳಿಯಲಾಗದಷ್ಟು ಹಾಳಾಗಿವೆ. ಆದರೆ ಚಿತ್ರಗಳ ಬಾಹ್ಯ ರೇಖೆಗಳು ಮಾತ್ರ ಅಲ್ಲಲ್ಲಿ ಉಳಿದಿರುವುದು ಚಿತ್ರದ ಜೀವಂತಿಕೆಯನ್ನು ಹಾಗೂ ಉತ್ತಮ ಸಾಂಪ್ರದಾಯಿಕ ಚಿತ್ರಗಳಿದ್ದವೆಂಬುದಕ್ಕೆ ಸಾಕ್ಷಿಯಾಗಿವೆ. ಅರ್ಥವತ್ತಾದ ರೇಖೆಗಳು ಕಲಾವಿದನ ನೈಪುಣ್ಯತೆಯ ಪ್ರತೀಕವಾಗಿವೆ. ಕಲಾವಿದನನ್ನು ಶಾಸ್ತ್ರೋಕ್ತವಾಗಿಯೇ ಇಲ್ಲಿನ ಚಿತ್ರಗಳನ್ನು ರಚಿಸಿದ್ದಾನೆ. ಪ್ರಕೃತಿವಿಕೋಪಕ್ಕೆ ಬೇಗ ತುತ್ತಾಗಿ ಹಾಳಾಗಿರುವುದು ನಮ್ಮೆಲ್ಲರ ದುರ್ದೈವವಾಗಿದೆ.

ಅಮೃತೂರಿನಲ್ಲಿನ ಭಿತ್ತಿ ಚಿತ್ರದಲ್ಲಿ ವೈಷ್ಣವ ಧರ್ಮದ ಹಿನ್ನೆಲೆಯ ಚಿತ್ರಗಳು ದೇವರ ಮೂರ್ತಿಯ ಎಡಭಾಗದ ಗೋಡೆಯಲ್ಲಿ ದೊಡ್ಡ ಗಾತ್ರದ ತಂಬುರನ ಚಿತ್ರವಿದೆ. ಕೈಯಲ್ಲಿ ತಂಬುರಿಯನ್ನು ಹಿಡಿದು ನಿಂತಿರುವ ಚಿತ್ರವು ಪ್ರತ್ಯೇಕ ಕಮಾನು ಹಾಗೂ ಎರಡೂ ಕಡೆಗಳಲ್ಲಿ ಗೊನೆಬಾಗಿದ ಬಾಳೆಗಿಡಗಳನ್ನ ಚಿತ್ರಿಸಲಾಗಿದೆ. ಇದೇ ಚಿತ್ರದ ತಲೆಯ ಮೇಲಿನ ಬೀಮಿನಲ್ಲಿ ದಶಾವತಾರದ ಚಿತ್ರಗಳು ಇದ್ದು ಅವುಗಳು ಯಾವು ಉಳಿದಿಲ್ಲ ಇದ್ದ ಕುರುಹುಗಳು ಮಾತ್ರ.

ತುಮಕೂರಿನ ನಲ್ಲಪ್ಪನವರ ಮನೆಯಲ್ಲಿನ ಭಿತ್ತಿ ಚಿತ್ರಗಳಲ್ಲಿ ಶೈವ ವೈಷ್ಣವ ಧರ್ಮದ ಹಿನ್ನೆಲೆಯ ಚಿತ್ರಗಳಿದ್ದು, ಅವುಗಳಲ್ಲಿ ವೈಷ್ಣವ ಧರ್ಮದ ಹಿನ್ನೆಲೆಯ ಚಿತ್ರಗಳಾದ ವಿಷ್ಣುವಿನ ದಶಾವತಾರಗಳ ದೃಶ್ಯಗಳನ್ನು ಚಿತ್ರಿಸಿದ್ದರು ಎಂದು ಸಂದರ್ಶನ ವೇಳೆ ಅವುಗಳನ್ನು ಮರುಕೃತಿ ಮಾಡಿದ ಕಲಾವಿದರು ತಿಳಿಸಿದರು. ಆದುದರಿಂದ ಅಲ್ಲಿಯೂ ಸಹಿತ ವೈಷ್ಣವ ಧರ್ಮದ ಹಿನ್ನೆಲೆ ಚಿತ್ರಗಳು ಇದ್ದವು ಎಂಬುದು ತಿಳಿಯುತ್ತದೆ.

ಜಿಲ್ಲೆಯಲ್ಲಿ ವೈಷ್ಣವ ಧರ್ಮದ ಹಿನ್ನೆಲೆಯ ಚಿತ್ರಗಳು ಬಹುಭಾಗದಲ್ಲಿ ಕಂಡು ಬಂದಿರುವುದು ಒಂದು ವಿಶೇಷವಾಗಿದೆ. ಶೈವ ಪುರಾಣದ ವಸ್ತುವಿಷಯಗಳು ಇದ್ದರು ·ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತವೆ. ಜಿಲ್ಲೆಯಾದ್ಯಂತ ಕಂಡು ಬರುವ ವಿಷ್ಣುವಿನ ದಶಾವತಾರ, ರಾಮಾಯಣದ ಕೆಲವು ದೃಶ್ಯಗಳು ಹಾಗೂ ಕೃಷ್ಣನ ಬಾಲ್ಯ ಲೀಲೆಗೆ ಸಂಬಂಧಿಸಿದ ಚಿತ್ರಗಳು ಸಾಮಾನ್ಯವಾಗಿವೆ. ಸಿಬಿಯ ದೇವಾಲಯದಲ್ಲಿರುವ ಚಿತ್ರಗಳು ವೈಷ್ಣವ ಧರ್ಮದ ಹಿನ್ನೆಲೆಯ ಭಾಗವತ ಪುರಾಣದ ಕೃಷ್ಣನ

ಜನನದಿಂದ ಪ್ರಾರಂಭಗೊಂಡು ವಿಶ್ವರೂಪದವರೆಗೆ ಹಾಗೂ ರಾಮಾಯಣದ ರಾಮನ ಜನನದಿಂದ ವನವಾಸ ಮುಗಿಸಿ ಪಮರು ಪಟ್ಟಾಭಿಷೇಕದವರೆಗಿನ ಸಾಂದರ್ಭಿಕ ಚಿತ್ರಗಳು ಕಣ್ಣಿಗೆ ಕಟ್ಟುವಂತಿವೆ. ರಾಮಾಯಣ ಹಾಗೂ ಭಾಗವತ ಪುರಾಣವನ್ನು ದೃಶ್ಯದ ಮೂಲಕ ಕಲಾವಿದ ಕಟ್ಟಿಕೊಡುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾನೆ ಎಂದು ಒಪ್ಪಿಕೊಳ್ಳಲೇಬೇಕು.

## ಅಡಿಟಿಪ್ಪಣಿ

೧. ಡಾ.ಅ.ಲ.ನರಸಿಂಹನ್, ಕ.ವಿ.ವಿಶ್ವಕೋಶ, ಪುಟ-೧೦೬

೨. ಅದೇ, ಪುಟ-೧೦೬

೩. ಅದೇ, ಪುಟ-೧೧೧

೪. ಡಾ.ಅ.ಲ.ನರಸಿಂಹನ್, ಕರ್ನಾಟಕ ಭಿತ್ತಿ ಚಿತ್ರ ಪರಂಪರೆ, ಪುಟ-೭೦



ಲಕ್ಷ್ಮೀನರಸಿಂಹ ಭಿತ್ತಿಚಿತ್ರ - ಸಿಬಿ



ಕೃಷ್ಣಲೀಲೆ ಭಿತ್ತಿಚಿತ್ರ – ೯೩



ಬಲರಾಮ-ಕೃಷ್ಣ



ವಾಮ-ಪರಶುರಾಮ

# ಸಂಕೀರ್ಣ ಭಿತ್ತಿಚಿತ್ರಗಳು

ತುಮಕೂರು ಜಿಲ್ಲೆಯಲ್ಲಿನ ಚಿತ್ರಕಲೆಯು ಹಲವಾರು ಮುಖಗಳನ್ನ ಹೊಂದಿದೆ. ಆದಿಮ ಕಾಲದಿಂದಲೂ ಚಿತ್ರರಚನೆಯ ನೆಲೆಗಳನ್ನು ಕಾಣುತ್ತೇವೆ. ಪ್ರಾಗಿತಿಹಾಸ ಕಾಲದ ಚಿತ್ರಗಳು, ಪೌರಾಣಿಕ ಚಿತ್ರಗಳು, ಧಾರ್ಮಿಕ ಚಿತ್ರಗಳು, ಸಾಮಾಜಿಕ ಚಿತ್ರಗಳು, ನೈಸರ್ಗಿಕ ಚಿತ್ರಗಳು ಎಂಬುದಾಗಿ ವಿಂಗಡಿಸಬಹುದು. ಐತಿಹಾಸಿಕ ಚಿತ್ರಗಳು ಇತಿಹಾಸವನ್ನು ಒಳಗೊಂಡಿದ್ದರೆ, ಪೌರಾಣಿಕ ಚಿತ್ರಗಳು ದೇವಾಧಿದೇವತೆಗಳು ಪುರಾಣಗಳ, ವೇದ ಉಪನಿಷತ್ತುಗಳ ಆಧಾರದ ಮೇಲೆ ರಚನೆಗೊಂಡಿರುತ್ತವೆ, ಧಾರ್ಮಿಕ ಚಿತ್ರಗಳು, ಶೈವ, ವೈಷ್ಣವ, ಬೌದ್ಧ, ಜೈನ, ಇಸ್ಲಂ, ಕ್ರೈಸ್ತ ಮುಂತಾದ ಧರ್ಮದ ಹಿನ್ನಲೆಯ ಚಿತ್ರಗಳಾಗಿರುತ್ತವೆ. ಸಾಮಾಜಿಕ ಈ ಚಿತ್ರಗಳು ಪ್ರಸ್ತುತ ಜನ ಜೀವನದ ಅಪಾರ ವಿಚಾರಗಳು, ಉಡುಗೆತೊಡುಗೆಗಳು ಆಹಾರ ಪದ್ಧತಿ, ವ್ಯಕ್ತಿಗೆ ಭಿನ್ನವಾದ ಕೆಲವು ಅಂಶಗಳು, ಯುದ್ಧ ಬೇಟೆ ಕುಣಿತ, ಮುಂತಾದ ಹತ್ತು ಹಲವಾರು ವಸ್ತು ವಿಷಯಗಳನ್ನು ಒಳಗೊಂಡ ಚಿತ್ರಗಳಾಗಿರುತ್ತವೆ.

ಆದಿಮ ಚಿತ್ರಗಳು ಸಾಮಾನ್ಯವಾಗಿ ಅಂದಿನ ಜನ ಜೀವನ ಹೇಗಿತ್ತು? ಸುತ್ತಮುತ್ತಲ ಪರಿಸರ ಹಾಗೂ ತಮ್ಮ ಆಚರಣೆಯ ಸುತ್ತ. ಹೆಣೆಯಲಾದ ವಸ್ತುವಿಷಯಗಳಾಧಾರಿತ ಚಿತ್ರಗಳಾಗಿರುತ್ತದೆ. ಈ ಪರಂಪರೆಯು ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ವ್ಯಕ್ತಿಯಿಂದ ವ್ಯಕ್ತಿಗೆ ಸಾಗುತ್ತವೆ. ಹಲವಾರು ಬದಲಾವಣೆಗಳನ್ನು ಹೊಂದುತ್ತ ಅಗತ್ಯ ಹಾಗೂ ಪೂರಕ ಅಂಶಗಳುಳ್ಳ ವಸ್ತುವಿಷಯಗಳ ಚಿತ್ರಗಳು ಕಲಾವಿದನ ಸ್ಮೃತಿ ಪಟಲದ ಮೇಲೆ ಮೂಡಿ ಚಿತ್ರಗಳಾಗಿ ಅಭಿವ್ಯಕ್ತಪಡಿಸುವುದು ಕಲಾವಿದನ ತುಡಿತವಾಗಿದೆ. ಈ ಪರಂಪರೆಯ ವಸ್ತು ವಿಷಯವು ಒಂದೇ ಆಗಿದ್ದು, ಆಚರಣೆಯ ದಿಕ್ಕು ಬದಲಾಗಿದೆ ಅಷ್ಟೇ.

ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳಲ್ಲಿ ಸಿಬಿಯ ಮಹಾದ್ವಾರದ ಮೇಲ್ಛಾವಣಿಯಲ್ಲಿರುವ ಚಿತ್ರಗಳು ಅಂದಿನ ಜನಜೀವನದ ಪ್ರತೀಕವಾಗಿವೆ. ಅಂದಿನ ಜನರ ಸ್ಥಿತಿಗತಿಗಳನ್ನು ಸ್ಪಷ್ಟವಾಗಿ ತಿಳಿಯಲು ಸಹಕಾರಿಯಾಗಿದೆ. ಕಲಾವಿದನು ಅಂದಿನ ಜನರ ಸ್ಥಿತಿಗತಿಗಳನ್ನು ಜನಜೀವನ ತಿಳಿಯಲು

ಸಹಕಾರಿಯಾಗಿದೆ. ಕಲಾವಿದನು ಅಂದಿನ ಜನಜೀವನವನ್ನು ಮರೆತಿಲ್ಲ ಸಂದರ್ಭೋಚಿತವಾಗಿ ಅಂದಿನ ಜಾನಕಾರ್ಯ ವೈಖರಿಯನ್ನು ಅಲ್ಲಲ್ಲಿ ನಿರೂಪಿಸಿದ್ದಾನೆ. ಪೌರಾಣಿಕ ಸಂದರ್ಭದಲ್ಲಿಯೂ ಆಯಾ ಪ್ರದೇಶದ ಜೀವನ ಕ್ರಮವನ್ನು ಚಿತ್ರಿಸಿದ್ದಾನೆ. ಕೃಷ್ಣಲೀಲೆಯ ಚಿತ್ರದ ಕೆಳಗೆ ಜನರು ಸಾಲಾಗಿ ಕೈ ಮುಗಿದು ನಿಂತಿದ್ದಾರೆ. ಮೈಸೂರಿನ ಅರಮಯನ್ನು ಅಲ್ಲಲ್ಲಿ ಎತ್ತೇಚ್ಛವಾಗಿ ಬಳಸಿದ್ದಾನೆ. ಎತ್ತರವಾದ ಕಂಬಗಳು. ಕಮಾನುಗಳು, ಬೀದಿ ದೀಪಗಳು ವಿಶೇಷವಾಗಿ ಬಳಸಿದ್ದಾರೆ. ಬೀದಿಯಲ್ಲಿ ಮೆರವಣಿಗೆ ಹೊರಟಾಗ ಅಕ್ಕ ಪಕ್ಕದಲ್ಲಿ ಜನ ಕಿಕ್ಕಿರಿದು ನೋಡುತ್ತಿದ್ದಾರೆ. ದೇವಾಧಿದೇವತೆಗಳ ದರ್ಶನ ಪಡೆಯಲು ಸ್ತ್ರೀಪುರುಷರು ಕಾದಿದ್ದಾರೆ. ಮತ್ತೊಂದು ಚಿತ್ರದ ಅಂಕಣದಲ್ಲಿ ಸ್ತ್ರೀಯರು ದೇವರ ದರ್ಶನಕ್ಕೆ ಕಾದು ನಿಂತಿದ್ದಾರೆ. ಪ್ರತಿಯೊಬ್ಬರು ಉದ್ದನೆಯ ಸೀರೆ ಉದ್ದನೆಯ ತೋಳಿನ ರವಿಕೆಗಳ ವರ್ಣ ನಕ್ಷೆಗಳು ತೀರ ಭಿನ್ನವಾಗಿವೆ. ಮೂವರು ತಾಯಂದಿರು ಮಕ್ಕಳೊಂದಿಗೆ ಹಾಜರಿದ್ದಾರೆ. ವಿಶ್ವರೂಪಿಯ ಮೇಲೆ ಇರುವ ಜಂತೆಯ ಮೇಲೆ ಪ್ರತಿಷ್ಠಿತ ನಾಗರಿಕನೊಬ್ಬನಿಗೆ ಇನ್ನಿತರರು ಕೈಮುಗಿದು ಸ್ವಾಗತಿಸಿದಂತಿದೆ. ಮುಖ್ಯ ಅತಿಥಿಯು ಮೊಣಕಾಲುದ್ದದ ನಿಲುವಂಗಿ ತೊಟ್ಟು ಧೋತರ ಉಟ್ಟು ನಕ್ಷೆಗಳಿರುವ ಶಾಲನ್ನು ಹೊದ್ದು ಕೈಯಲ್ಲಿರುವ ಹೂವನ್ನು ಮೂಸುತಿದ್ದಾನೆ. ಬಲಗಡೆಗೆ ಪತ್ನಿ ಇದ್ದಾಳೆ. ಇನ್ನಿತರರ ನಿಲುವಂಗಿಗಳು ವಿವಿಧ ವರ್ಣಗಳ ನಕ್ಷೆಗಳಿಂದ ಕೂಡಿದೆ. ತಲೆಗೆ ರುಮಾಲು ಸುತ್ತಿದ್ದಾರೆ. ಇದು ಪೇಶ್ವೆಯರ ಭಾವ ಚಿತ್ರಗಳನ್ನು ನೆನಪಿಗೆ ತರುತ್ತವೆ. ಪ್ರತಿಯೊಬ್ಬ ಸ್ತ್ರೀಯು ಮೈ ತುಂಬ ಆಭರಣಗಳನ್ನು ತೊಟ್ಟು ಉತ್ತಮ ಪೋಷಾಕಿನಲ್ಲಿರುವುದರಿಂದ ಅವರೆಲ್ಲ ಸ್ಥಿತಿವಂತರೆಂಬ ಭಾವನೆ ಮೂಡುತ್ತದೆ.

ಮತ್ತೊಂದು ಚೌಕದಲ್ಲಿ ಬ್ರಾಹ್ಮಣ ದಂಪತಿಗಳು ಇಷ್ಟದೇವತೆಯನ್ನು ಕೈಮುಗಿದು ದೈವ ಕೃಪೆಗೆ ಪಾತ್ರರಾಗುತ್ತಿದ್ದಾರೆ. ಕೆಲವರು ಕೈಯಲ್ಲಿ ಫಲಪುಷ್ಪಗಳನ್ನು ಹಿಡಿದುಕೊಂಡಿದ್ದಾರೆ. ಕೆಲವರು ಗಡ್ಡದಾರಿಗಳು, ಕೆಲವರು ತಲೆಬೋಳಿಸಿ, ಕೆಲವರು ಜುಟ್ಟುಬಿಟ್ಟುಕೊಂಡಿರುವವರು ಸಾಮಾನ್ಯವಾಗಿ ಪುರೋಹಿತ ವರ್ಗದವರೇ ಆಗಿರುತ್ತಾರೆ. ಕೆಲವು ಗಂಡಸರು ಅಕ್ಕ ಪಕ್ಕದಲ್ಲಿ ಇಬ್ಬಿಬ್ಬರು ಹೆಂಗಸರು ನಿಂತಿರುವುದು ದ್ವಿಪತ್ನಿಯರಿರಬೇಕು ಎನ್ನಿಸುತ್ತದೆ.

ಇನ್ನೊಂದು ಚಿತ್ರಚೌಕದಲ್ಲಿ ಮದುವೆಯ ಸಂಭ್ರಮದ ವಾತಾವರಣವನ್ನು ಕನ್ಯಾದಾನ ಮಾಡುತ್ತಿರುವುದು ಚಿತ್ರಿಸಲಾಗಿದೆ. ನಡುವಿನ ತೊಲೆಯಲ್ಲಿ ಸಹಗಮನಕ್ಕೆ ಹೊರಟ ಗೃಹಿಣಿಯನ್ನು ಹಿಂಬಾಲಿಸಿ ಏಳು ಇತರ ಹೆಂಗೆಳೆಯರೂ ಹೊರಟಿದ್ದಾರೆ. ಎಲ್ಲರ ಮುಖದಲ್ಲಿ ದುಃಖ ಮಡುಗಟ್ಟಿದೆ ಸಾಧಾರಣವಾದ ಸೀರೆಯನ್ನು ಉಟ್ಟು ತಲೆ ಮೇಲೆ ಸೆರಗುಹೊದ್ದಿದ್ದಾರೆ. ಇದೇ ಹಿಂದಿನ ಚಿತ್ರಪಟ್ಟಿಕೆಯಲ್ಲಿ ಇದೇ ಉಡುಪಿನ ಮಹಿಳೆಯೊಬ್ಬಳು ಗಡ್ಡದಾರಿ ಸ್ವಾಮಿಯೋರ್ವನ ಜೊತೆ ಭಕ್ತಿಯಿಂದ ನಮಿಸಿ ಅಪ್ಪಣೆ ಬೇಡುವಂತಿದೆ ಬಹುಶಃ ತನ್ನ ಸಹಗಮನ ನಿರ್ಧಾರವನ್ನು ಅವರೊಂದಿಗೆ ಚರ್ಚಿಸುತ್ತಿರಬಹುದು. ಅಪ್ಪಣೆ ಆಶೀರ್ವಾದಗಳನ್ನುಬೇಡುತ್ತಿರಬಹುದು ಎನಿಸುತ್ತದೆ. ಈ ಚಿತ್ರವು ನಲ್ಲಪ್ಪನ ಮನೆಯೊಳಗಿನ ಜೀವನದ ನೈಜ ಘಟನೆ ಎನ್ನುವುದು ಕೆಲವರ ಅಭಿಪ್ರಾಯವಾಗಿದೆ.

ಈ ಹಿಂದೆ ಹೇಳಿದ ಹಾಗೆ ಪುರಾಣದ ಚಿತ್ರಗಳಲ್ಲಿ ಯುದ್ಧ ಅಥವಾ ಜನಸಾಮಾನ್ಯರ ದೃಶ್ಯವು ಕಲಾವಿದನು ಕಾಲಕ್ಕೆ ಸಮೀಕರಿಸಿಕೊಂಡು ಅಂದಿನ ನೈಜ ಘಟನೆಗಳನ್ನು ಚಿತ್ರದಲ್ಲಿಮೂಡಿಸಿರುವುದು ಕಲಾವಿದನ ಜಾಣ್ಮೆಗೆ ಹಿಡಿದ ಕನ್ನಡಿಯಾಗಿದೆ. ಮಹಾಭಾರತದ ಯುದ್ಧಗಳು, ಮೈಸೂರು ಅರಸರ ಕಾಲದ ಯುದ್ಧದ ಚಿತ್ರಗಳು ಹೆಚ್ಚು ಸಾಮ್ಯತೆಯಿಂದ ಕೂಡಿರುತ್ತವೆ. ಬ್ರಿಟೀಷರ ವೇಷ ಭೂಷಣ ಆಯುಧ ಬಂದೂಕು ತುಪಾಕಿಗಳು ಕತ್ತಿಗುರಾಣಿಗಳು ರಥ ಮೊದಲಾದ ವಸ್ತುಗಳು ಪ್ರಸ್ತುತ ಅರಸರು ಬಳಸುತ್ತಿದ್ದ ಮಾದರಿಯೇ ಆಗಿರುತ್ತವೆ. ಸೈನಿಕರು ಸಾಲಾಗಿ ಒಬ್ಬರ ಹಿಂದೆ ಒಬ್ಬರು ನೂಕುನುಗ್ಗಲಂತೆ ತುರಿಕದಂತೆ ರಚನೆಯಾಗಿದೆ. ದದರಿಯಾ ದವಲತ್‌ನ ಚಿತ್ರಗಳನ್ನು ಶಿವರಾಮಕಾರಂತರು ಹೀಗೆ ವಿಮರ್ಶಿಸುತ್ತಾರೆ. ಯುದ್ಧದ ಸನ್ನಿವೇಷದಲ್ಲಿ ಬರುವ ಸೈನಿಕರನ್ನು ಸಾಲಾಗಿ ನಿಲ್ಲಿಸಿ ಒಬ್ಬರ ಮೇಲೆ ಒಬ್ಬರಂತೆ ತುರುಕಿದ್ದಾರೆ. ಕಲಾವಿದನು ಸ್ಥಳಾವಕಾಶದ ಅಭಾವದಿಂದ ಹೆಚ್ಚಿನ ಜನ ಸಂಖ್ಯೆಯನ್ನು ತೋರಿಸುವ ಸಲುವಾಗಿ ಹೀಗೆ ಚಿತ್ರಿಸಿದ್ದಾನೆ. ಒಬ್ಬರ ಆಯುಧವು ಮತ್ತೊಬ್ಬರ ದೇಹದಿಂದ ತೂರಿದಂತಿರುವುದು ಕಂಡು ಬರುತ್ತದೆ. ಅದೇ ಮಾದರಿಯ ಚಿತ್ರಗಳು ಇಲ್ಲಿಯೂ ಚಿತ್ರಿಸಲಾಗಿದೆ. ಅಶ್ವ, ಆನೆ, ಒಂಟೆಗಳು ಎರಡು ಸಾಲುಗಳಿದ್ದು ಈ ಸಾಲುಗಳಲ್ಲಿಯೂ ಸಾಲಾಗಿ ನಿಂತಿವೆ. ಈ ಸಾಲು ಕಾಲಾಳುಗಳಿಂದ ಮೊದಲುಗೊಳ್ಳುತ್ತದೆ. ಕಾಲಾಳುಗಳು ನಿಲುವಂಗಿ ತೊಟ್ಟು ಬಿಗಿಯಾದ ಪೈಜಾಮು ಧರಿಸಿದ್ದಾರೆ ಶ್ರೀರಂಗ ಪಟ್ಟಣದ ಯುದ್ಧದ ಕಾಲಾಳುಗಳು ಇದೇ ಮಾದರಿಯ ವಸ್ತ್ರವಿನ್ಯಾಸವನ್ನು ಬಳಸಲಾಗಿದೆ. ಇದರಿಂದ ಸೈನಿಕರಿಗೆ ಏಕಪ್ರಕಾರವಾದ ಸಮವಸ್ತ್ರವನ್ನು ಬಳಸಿರುವುದು ತಿಳಿಯುತ್ತದೆ. ಜೊತೆಗೆ ಸೊಂಟಕ್ಕೆ ಅಂಗವಸ್ತ್ರವನ್ನು ಕಟ್ಟಿದ್ದಾರೆ. ತಲೆಗೆ ರುಮಾಲು ಕಟ್ಟಿ ಕೈಯಲ್ಲಿ ಬರಚಿ ಹಿಡಿದು ಮುಂದೆ ಸಾಗಿದ್ದಾರೆ. ಇವರನ್ನು ಹಿಂಬಾಲಿಸಿ ಅಶ್ವದಳ ಸಾಗುತ್ತಿದೆ. ವಿಶೇಷವಾಗಿ ವಿಜಯನಗರದ ಜನಪ್ರಿಯವಾಗಿದ್ದ ಕುಲಾಯಿಗಳನ್ನು ಹೋಲುವಂತಹ ಟೋಪಿಗಳನ್ನು ಧರಿಸಿದ್ದಾರೆ. ಇವರನ್ನು ಹಿಂಬಾಲಿಸಿ ಕದನವಾದ್ಯಗಳಾದ ಕಹಳೆ, ಕೊಂಬು, ತುತೂರಿ, ನಗಾರಿಗಳಂತಹ ವಾಧ್ಯಗಳ ಘೋಷ ಮೊಳಗಿಸಿಕೊಂಡು ಹೊರಟಿದ್ದಾರೆ. ಸೇನಾಧಿಕಾರಿಗಳು ಅಂಬಾರಿಯ ಮೇಲೆ ಗಾಂಭೀರ್ಯದ ನಡಿಗೆಯಲ್ಲಿ ಸಾಗಿದ್ದಾರೆ ಅವರ ಅಂಗರಕ್ಷಕರು ಧ್ವಜವನ್ನು ಹಿಡಿದು ಮುನ್ನುಗುತ್ತಿರುವ ದೃಶ್ಯನೋಡುಗನಿಗೆ ಯುದ್ಧದ ಸನ್ನಿವೇಶವನ್ನು ನೆನಪಿಗೆ ತರತ್ತದೆ.

ಮಹಾದ್ವಾರದ ಅಂಗಳದ ಸುತ್ತಲೂ ಜಂತಿಯ ಮೇಲಿರುವ ಯುದ್ಧದ ಚಿತ್ರಗಳು ಶ್ರೀರಂಗಪಟ್ಟಣದ ಅರಮನೆಯ ವರ್ಣಚಿತ್ರಗಳು ನೆನಪಿಗೆ ತರುತ್ತವೆ. ಮೊಣಕಾಲಿನತನಕ ಪೈಜಾಮ ಧರಿಸಿ ಕೈಯಲ್ಲಿಪಾಶ್ಚಿಮಾತ್ಯರ ಬಂದೂಕು ಹಿಡಿದಿದ್ದಾರೆ. ಈ ಚಿತ್ರದಲ್ಲಿ ಪಾಶ್ಚಿಮಾತ್ಯರ ಪ್ರಭಾವ ಹೆಚ್ಚಾಗಿ ಬೀರಿದೆ. ಆದರೆ ಧರಿಸಿರುವ ವಸ್ತ್ರಗಳು ಪ್ರಾದೇಶಿಕತೆಯನ್ನು ತೋರುತ್ತದೆ. ರುಮಾಲು ಸುತ್ತಿ ನಿಲುವಂಗಿ ಧರಿಸಿ ಚಪ್ಪಲಿಗಳನ್ನು ಮೆಟ್ಟಿದ್ದಾರೆ. ತುಪಾಕಿ ಗಾಡಿಗಳನ್ನು ಆರು ಎತ್ತುಗಳು ಎಳೆಯುತ್ತಿವೆ ಸವಾರಿಗ ಅವುಗಳನ್ನು ದಂಡಿಸುತ್ತಿದ್ದಾನೆ ಆನೆಯು ಗಾಡಿಯ ಚಲನೆಗೆ ಸಹಾಯ ಮಾಡುತ್ತಿದೆ. ಮತ್ತೊಂದು

ತುಪಾಕಿ ಗಾಡಿಯು ದಿಬ್ಬವನ್ನು ಏರದೆ ಹಿಂದಕ್ಕೆ ಬರುವ ಸಮಯದಲ್ಲಿ ಆನೆಯೊಂದು ತನ್ನ ಸೊಂಡಿಲಿನಿಂದ ಗಾಡಿಯ ಹಿಂದೆ ಉರುಳದಂತೆ ತಡೆದ ಈ ಗಾಡಿಗೆ ನಾಲ್ಕು ಎತ್ತುಗಳನ್ನು ಊಡಿದ್ದಾರೆ. ಆನೆಗಳೊಂದಿಗೆ ಒಂಟೆಗಳು, ಸವಾರರು ಹೊರಟಿದ್ದಾರೆ. ಮತ್ತೊಂದು ದೃಶ್ಯವು ಯುದ್ಧದ ಮೈದಾನದಲ್ಲಿ ಡೇರೆಯೊಂದಿಗೆ ಅಧಿಕಾರಿಗಳು ವಾಸ್ತವ್ಯ ಹೂಡಿದ್ದಾರೆ. ಡೇರೆಯ ಸುತ್ತಮುತ್ತಲು ಜನರು ಓಡಾಡುತ್ತಿದ್ದಾರೆ. ಡೇರೆಯನ್ನು ನಾಲ್ಕು ಜನ ಕಾವಲುಗಾರರು ಸಮವಸ್ತ್ರದೊಂದಿಗೆ ಕಾಯುತ್ತಿದ್ದಾರೆ.

ರಾಜಗೋಪುರದ ಮಹಾದ್ವಾರದ ಛಾವಣಿಯಲ್ಲಿ ಇರುವ ಚಿತ್ರವು ನಿಸರ್ಗ ಚಿತ್ರವಾಗಿದ್ದು ಮತ್ತು ಅಂದಿನ ಜನ ಜೀವನದ ಸ್ಥಿತಿಗತಿಗಳನ್ನು ಪ್ರತಿಬಿಂಬಿಸುವ ಚಿತ್ರವಾಗಿದೆ. ಈ ಅಂಕಣದಲ್ಲಿ ಕೃಷ್ಣ ಬಲರಾಮನು ಸೇರಿದಂತೆ ಇತರೆ ಬಾಲಕರೊಡನೆ ಕೊಳಲನೂದಿ ನರ್ತಿಸುತ್ತಿದ್ದಾನೆ. ಕೆಲವು ಬಾಲಕರು ಗೋವುಗಳನ್ನು ಕಾಯುತ್ತಿದ್ದಾರೆ. ಇಬ್ಬರು ಮುನಿವರ್ಯರು ಇಹಲೋಕದ ಚಿಂತೆ ಇಲ್ಲದೆ ಧ್ಯಾನಸ್ತರಾಗಿದ್ದಾರೆ. ಅವರ ಶಿಷ್ಯಂದಿರು ಅವರ ಯೋಗಕ್ಕೆ ಬೇಕಾದ ಸಲಕರಣೆಯನ್ನು ಒದಗಿಸುತ್ತಿದ್ದಾರೆ. ಗೋವುಗಳ ಹಿಂಡು ಮೇಯಲು ಹೊರಟಿವೆ. ಹಸಿದು ಗೋವುಗಳು ಹುಲ್ಲನ್ನು ಹರಿಸಿದರೆ ಗೂಳಿಗಳೆ ಪ್ರೇಮ ಕಾಮನೆಯಿಂದ ಕಾಮದಾಹವನ್ನು ತೀರಿಸಿಕೊಳ್ಳಲು ಹವಣಿಸುತ್ತಿವೆ. ಮದಭರಿತ ಗೋವುಗಳು ಗೂಳಿಯ ಆಗಮನವನ್ನು ನಿರೀಕ್ಷಿಸುತ್ತಿವೆ. ಕೆಲವು ಗೂಳಿಗಳು ಸಂಭೋಗ ಕ್ರಿಯೆಯಲ್ಲಿ ತೊಡಗಿವೆ. ಮತ್ತೆ ಕೆಲವು ಪ್ರೇಯಸಿಯನ್ನವರಿಸಲು ಪೈಪೋಟಿಯಿಂದ ಕಾಳಗಕ್ಕೆ ಬಿದ್ದಿದ್ದಾವೆ. ಕೋಣವು ಸಹ ಕಾಮಕ್ಕೆ ಒಳಗಾಗಿ ರತಿಲೀಲೆಗೆ ತೊಡಗಿದೆ ಅದಕ್ಕೆ ಪ್ರತಿಯಾಗಿ ಹೆಣ್ಣು ಸಹಕರಿಸಿದೆ. ಈ ಗೋವುಗಳನ್ನು ಹಿಂಬಾಲಿಸಿ ಓರ್ವವ್ಯಕ್ತಿಯು ಅಡ್ಡೆಯಲ್ಲಿ ಹಾಲು ಮೊಸರಿನ ಮಡಕೆಯನ್ನು ಹೊತ್ತು ಬರುತ್ತಿದ್ದಾರೆ, ಸಾಧಾರಣವಾದ ಅರ್ಧ ಬಟ್ಟೆಧರಿಸಿದ್ದಾನೆ ಹೆಗಲ ಮೇಲೆ ಅಂಗ ವಸ್ತ್ರ, ಕಾಲಿಗೆ ಚಪ್ಪಲಿ ತೊಟ್ಟಿದ್ದಾನೆ. ತಲೆಗೆ ರುಮಾಲು ತೊಟ್ಟು ದಪ್ಪ ಮೀಸೆಯ ಮನುಷ್ಯ ತನ್ನ ಕಾಯಕದಲ್ಲಿ ತೊಡಗಿದ್ದಾನೆ. ಸ್ತ್ರೀಯೊಬ್ಬಳು ಮೊಸರಿನ ಗಡಿಗೆಯನ್ನು ತಲೆಯಮೇಲೆ ಹೊತ್ತು ಬೇರೊಬ್ಬಳಿಗೆ ಮಾರುತ್ತಿದ್ದಾಳೆ. ಮೂವರು ಸ್ತ್ರೀಯರು ನೀರಿನ ಕೊಡ ಕಂಕುಳಿನಲ್ಲಿ ಇರಿಸಿಕೊಂಡು ಹರಟೆಯಲ್ಲಿ ನಿರತರಾಗಿದ್ದಾರೆ. ಒಬ್ಬಳು ಮಾತ್ರ ಮಗುವಿನೊಂದಿಗೆ ಬಂದು ನಿಧಾನವಾಗಿ ಕರೆದೊಯ್ಯಲು ಪ್ರಯತ್ನಿಸುತ್ತಿದ್ದಾಳೆ. ಈ ಸನ್ನಿವೇಷವು ವಠಾರದ ಸುತ್ತಮುತ್ತ ನಡೆದಿದೆ ಎನ್ನುವುದಕ್ಕೆ ಸಾಂಕೇತಿಕವಾಗಿ ವೃತ್ತಾಕಾರದೊಳಗೆ ಮನೆಗಳನ್ನು ತೋರಿಸಿದ್ದಾನೆ.

ಮತ್ತೊಂದೆಡೆ ಇಬ್ಬರು ಬೇಟೆಗಾರರು ಈಟಿಯಿಂದ ಹಂದಿಯನ್ನು ಹಿರಿದಿದ್ದಾರೆ. ಒಬ್ಬ ತಲೆಗೆ ರುಮಾಲು ಸುತ್ತಿ, ಮತ್ತೊಬ್ಬ ವತ್ರುಲಾಕಾರದ ಕುಲುಮೆಯನ್ನು ಧರಿಸಿದ್ದಾನೆ, ಪಂಚೆಯನ್ನು ಬಿಗಿಯಾಗಿ ಬಿಗಿದಿದ್ದಾರೆ. ಬೇಟೆನಾಯಿಗಳೆರಡು ಒಂದು ಹಂದಿಯನ್ನು ಭೇದಿಸಿವೆ. ಒಂದು ನಾಯಿ ಹಂದಿಯ ಕಾಲನ್ನು ಕಚ್ಚಿದೆ ಮತ್ತೊಂದು ಹಂದಿಯು ಮುಂದೆ ಹೋಗದಂತೆ ತಡೆಯಲು ಪ್ರಯತ್ನಿಸುತ್ತಿದೆ.

ನಾಯಿಗಳು ಹಸಿರು ಮತ್ತು ಬಿಳಿ ಮೈ ಬಣ್ಣವನ್ನು ಹೊಂದಿವೆ. ಮತ್ತೊಂದು ದೃಶ್ಯದಲ್ಲಿ ಹುಲಿಯನ್ನು ಕೊಲ್ಲುತ್ತಿರುವ ವ್ಯಕ್ತಿಯ ಚಿತ್ರವಿದೆ. ತಲೆಗೆ ರುಮಾಲು ಕಟ್ಟಿ ಬಿಗಿಯಾಗಿ ಪಂಚೆ ಸುತ್ತಿದ್ದಾನೆ. ಓರ್ವ ವ್ಯಕ್ತಿ ಕೊಡ್ನಲಿಯಿಂದ ಮರವನ್ನುಕತ್ತರಿಸುತ್ತಿದ್ದಾನೆ. ಬೆಟ್ಟಗುಡ್ಡ ಬೃಹದಾಕಾರದ ಬಂಡೆಗಳಲ್ಲಿ ಆಶ್ರಯ ಪಡೆದ ಆನೆ, ಹುಲಿ, ಸಿಂಹ, ಚಿರತೆ, ಕರಡಿ ಮುಂತಾದ ಕ್ರೂರಮೃಗಗಳು ಆಹಾರಕ್ಕಾಗಿ ಹೊಂಚು ಹಾಕುತ್ತಿವೆ. ಸಿಂಹವೊಂದು ಆನೆಯನ್ನು ಸಂಹರಿಸಲು ಆನೆಯ ಮೈ ಮೇಲೆ ಎರಗಿ ಅಣೆಗೆ ಬಾಯಿ ಹಾಕಿ ಆನೆಯನ್ನು ಅಡಗಿಸಿದೆ. ಮತ್ತೊಂದು ಆನೆ ಎದರದೆ ಹುಲಿ ಜೊತೆ ಕಾಳಗಕ್ಕೆ ನಿಂತಿದೆ. ತನ್ನ ಬಲಪ್ರಯೋಗವನ್ನು ಪ್ರದರ್ಶಿಸುತ್ತಿದೆ. ಮತ್ತೆ ಕೆಲವು ಆಹಾರವನ್ನು ಹರಸಿ ಹೊರಟಿವೆ. ವಿಷಸರ್ಪಗಳು, ಜಿಂಕೆ, ತೋಳ, ಏಡಿ, ಚೇಳು, ದೊಣ್ಣೆಕ್ಯಾತ, ಮತ್ತಿತರ ವಿಚಿತ್ರ ಪ್ರಾಣಿಗಳನ್ನು ಕಲಾವಿದನು ಸೃಜನಾತ್ಮಕವಾಗಿ ರಚಿಸಿದ್ದಾನೆ.

ಮತ್ತೊಂದೆಡೆ ನವಿಲುಗಳ ಗುಂಪೊಂದು ಸಖಿಸಖಿಯರೊಡನೆ ನೃತ್ಯಭಂಗಿಯಲ್ಲಿವೆ, ಟಿಪ್ಪುವಿನ ಮಾದರಿಯ ಪೋಷಾಕಿನೊಂದಿಗೆ ಉದ್ದನೆಯ ನಿಲುವಂಗಿ, ಬಿಗಿಯಾದ ಪೈಜಾಮು ತಲೆಗೆ ಟಿಪ್ಪುವು ಬಳಸುತ್ತಿದ್ದ ಮಾದರಿಯ ಟೊಪ್ಪಿಗೆ ಸೊಂಟಕ್ಕೆ ವಸ್ತ್ರವನ್ನು ಬಿಗಿದಿದ್ದಾನೆ, ಅಂಗಿಯು ಚುಕ್ಕಿಗಳಿಂದ ಅಲಂಕರಿಸಲಾಗಿದೆ. ಈ ವ್ಯಕ್ತಿಯು ಎಡಗೈಯಲ್ಲಿ ಈಟಿಯಿಂದ ಹಂದಿಯನ್ನು, ಬಲಗೈಯಲ್ಲಿ ಕತ್ತಿಯಿಂದ ಹುಲಿಯನ್ನು ತನ್ನ ಕಾಲುಗಳಿಂದ ವಿಷ ಸರ್ಪವನ್ನು ಕೊಲ್ಲುತ್ತಿರುವ ಅಪರೂಪದ ವಿಶಿಷ್ಟ ಭಂಗಿಯ ಚಿತ್ರವಾಗಿದೆ. ಈ ಚಿತ್ರವನ್ನು ಟಿಪ್ಪುವಿನ ಬೇಟೆಯ ದೃಶ್ಯ ಎಂದರೆ ತಪ್ಪಾಗಲಾರದು. ಹೂಗಳ ಮಧುವನ್ನು ಹೀರಲು ದುಂಬಿಗಳು, ಬಾತುಕೋಳಿ, ಪಾರಿವಾಳ, ಕೌಜುಗ ಮತ್ತಿತರ ಹಕ್ಕಿಗಳು ಗುಂಪುಗುಂಪಾಗಿ ಇವೆ. ವ್ಯಕ್ತಿಯೊಬ್ಬನು ಕುರಿಗಳ ಹಿಂಡನ್ನು ಕಾಯುವ ದೃಶ್ಯವಿದ್ದು ತಲೆಗೆ ರುಮಾಲು ಬಿಗಿಯಾದ ಪಂಚೆ ಸುತ್ತಿದ್ದಾನೆ. ಇವನ ಹಿಂದೆ ಕುರಿಗಳು ಹಿಂಬಾಲಿಸಿವೆ. ಅವುಗಳಲ್ಲಿ ಕೆಲವು ಕುರಿಗಳು ಹುಲ್ಲನ್ನು ತಿನ್ನುತ್ತಿದ್ದರೆ ಕೆಲವು ಟಗರುಗಳು ಶಕ್ತಿ ಪ್ರದರ್ಶಿಸುತ್ತಿವೆ. ಇವುಗಳ ಹಿಂದೆ ಮತೊಬ್ಬ ಅವುಗಳ ವೀಕ್ಷಣೆ ಮಾಡುತ್ತಿದ್ದಾನೆ. ಮತ್ತೊಂದು ಗುಂಪಿನಲ್ಲಿ ಆಡು ಮೇಕೆಗಳನ್ನು ಕಾಯುವ ಮತ್ತೋರ್ವ ತಲೆಗೆ ಕುಲಾವಿ, ಹೆಗಲ ಮೇಲೆ ಅಂಗವಸ್ತ್ರ, ಒಂದು ಪಂಚೆ ತೊಟ್ಟಿದ್ದಾನೆ. ಮೇಕೆಗಳು ಬೇಟೆನಾಯಿಗಳ ಕಾವಲಿನಲ್ಲಿ ನಿರ್ಭಯವಾಗಿ ಮೇಯುತ್ತಿವೆ. ನಾಯಿಗಳು ಮೇಕೆಗಳ ರಕ್ಷಣೆಯಲ್ಲಿ ನಿರತವಾಗಿವೆ ಶತ್ರುಗಳ ಬರುವಿಕೆಯನ್ನು ನಿರೀಕ್ಷಿಸುತ್ತಿವೆ.

ಈಡಿಗರು ಈಚಲಮರವನ್ನೇರಿ ಹೆಂಡವನ್ನು ಇಳಿಸುವ ಕಾಯಕದಲ್ಲಿ ನಿರತನಾಗಿದ್ದಾರೆ. ಕೆಲವರು ಮರವನ್ನು ಏರುತ್ತಿದ್ದಾರೆ ಕೆಲವರು ಹೆಂಡ ಇಳಿಸುತ್ತಿದ್ದಾರೆ. ಮತ್ತೊಬ್ಬರು ಕತ್ತೆಯ ಮೇಲೆ ಚರ್ಮದ ಚೀಲವೊಂದರಲ್ಲಿ ಹೆಂಡವನ್ನು ಸುರಿಯುತ್ತಿದ್ದಾನೆ. ಮಹಿಳೆಯೋರ್ವಳು ತುಂಡುಸೀರೆಯುಟ್ಟು ಹೆಂಡದ ಗಡಿಗೆಯನ್ನು ತಲೆಯ ಮೇಲೆ ಹೊತ್ತು ಕತ್ತೆಯ ಮೇಲೆ ಚೀಲದಲ್ಲಿ ಸುರಿಯಲು ಸಹಕಾರ ಮಾಡುತ್ತಿದ್ದಾಳೆ.

ಮತ್ತೊಬ್ಬನು ಕೊಡಲಿಯನ್ನು ಹೆಗಲಿಗೇರಿಸಿ ಕಾಡಿಗೆ ಹೊರಟ್ಟಿದ್ದಾನೆ. ಈ ದೃಶ್ಯವು ಈಡಿಗರ ವೃತ್ತಿ ಬದಕನ್ನು ಕಟ್ಟಿಕೊಡುವ ಪ್ರಯತ್ನಮಾಡಿದ್ದಾನೆ. ಇಲ್ಲಿ ಈಡಿಗರ ಪ್ರಭಾವ ಈ ಪ್ರದೇಶದಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ.

ಕಲಾವಿದನು ನಿಸರ್ಗವನ್ನು ಮರೆಯದೆ ಅವಕಾಶ ಸಿಕ್ಕಿದ ಕಡೆಯಲ್ಲಿ ಪ್ರಕೃತಿಯ ಗಿಡ ಮರ ಹೂ ಬಳ್ಳಿ ಹಕ್ಕಿ ಪಕ್ಷಿಗಳು ಪ್ರಾಣಿಗಳು ಸಾಕುಪ್ರಾಣಿಗಳು, ಕಾಡು ಪ್ರಾಣಿಗಳನ್ನು ಹಾಗೂ ಅವುಗಳೊಂದಿಗೆ ಕಾಳಗ ಮತ್ತಿತರ ಕ್ರಿಯೆಯೊಂದಿಗೆ ದಿನದ ಚಟುವಟಿಕೆ ದೊಡ್ಡ ಅಂಕಣದ ಸುತ್ತಲೂ ವಿಶಾಲವಾದ ಅಂಚನ್ನು ಅಲಂಕಾರ ಹೂಬಳ್ಳಿಗಳಿಂದ ಚಿತ್ರಿಸಲಾಗಿದೆ. ಅಲಂಕಾರಿಕ ನಕ್ಷೆಯು ವಿಶೇಷ ವೃತ್ತದೊಳಗೆ ಪುನರಾವರ್ತಿತ ಹೂ ಬಳ್ಳಿಗಳಿಂದ ತುಂಬಲಾಗಿದೆ. ಜಂತೆಯ ಕೆಳಭಾಗದಲ್ಲಿ ಹೂ ಪರ್ಣಗಳ ನಕ್ಷೆಗಳಿಂದ ತುಂಬಲಾಗಿದೆ. ಈ ಮಾದರಿಗಳು ಬಿಜಾಪುರದ ಅರಮನೆಯ, ಮೈಸೂರು ಅರಮನೆಯ, ಮೈಸೂರಿನ ಪ್ರಸನ್ನ ಕಾಮೇಶ್ವರ ದೇವಾಲಯದಲ್ಲಿ ಕೆರೆಗೋಡಿ ರಂಗಾಪುರ ಹಂಪಿ ಮುಂತಾದ ಕಡೆಗಳಲ್ಲಿ ಸಾಮಾನ್ಯವಾಗಿ ಬಳಸಿರುವುದು ಕಂಡುಬರುತ್ತದೆ. ಕೆಲವು ಕಡೆ ಹೂ ಬಳ್ಳಿಗಳು ನೈಜವಾಗಿದ್ದು ಕೆಲವೆಡೆ ಗಿಳಿ, ಹೂ ಕಾಯಿಗಳಗಳನ್ನು ಅಲಂಕಾರಿಕವಾಗಿ ಬಳಸಲಾಗಿದೆ. ಅಲಂಕಾರಿಕವಾಗಿ ಒಂದು ವಿಶೇಷ ಪ್ರಾಣಿಯನ್ನು ಚಿತ್ರಿಸಿದ್ದು, ಈ ಪ್ರಾಣಿಯು ಸಿಂಹದ ಮುಖ ಭಾವವನ್ನು ಹೊಂದಿದ್ದು ಎಂಟು ಕಾಲುಗಳು ಹಾಗೂ ಎರಡು ಕೈಗಳೋಪಾದಿಯಲ್ಲಿದ್ದು ಸಿಂಹನ ಕಾಲುಗಳನ್ನು ಹೋಲುತ್ತವೆ. ತಲೆ ಮೇಲೆ ಕಿರೀಟದೋಪಾದಿಯ ಒಂದು ಬಗೆಯ ಅರಳಿದ ಹೂವಿನ ಮಾದರಿಯಿಂದ ಕೂಡಿದೆ. ನೋಡಲು ಭಯಾನಕವಾಗಿರುವ ಈ ಪ್ರಾಣಿಯು ಸಹಜವಾಗಿ ನೋಡಲು ಸಾಧ್ಯವಿಲ್ಲ ಇದು ಕಲಾವಿದನ ವಿಶೇಷ ಕಲಾ ಪ್ರಜ್ಞೆ ಸೃಜನಾತ್ಮಕ ಸೃಷ್ಠಿ ಎಂದೇ ಹೇಳಬಹುದು.

ಕಲಾವಿದನು ಚಿತ್ರ ಬರೆಯುವಾಗ ಪ್ರಾದೇಶಿಕ ಹಿನ್ನೆಲೆಯನ್ನು ಅವಲಂಬಿಸಿರುತ್ತಾನೆ ಎಂಬುದಕ್ಕೆ ಸಿಬಿಯ ಈಡಿಗ ಸಮುದಾಯದ ವೃತ್ತಿ ಜೀವನವನ್ನು ಕುರಿತು ಹೇಳಲಾಗಿದೆ. ಅದೇ ರೀತಿ ಸಿರಾದ ರೇವಣ ಸಿದ್ದೇಶ್ವರ ದೇವಾಲಯದಲ್ಲಿನ ಭಿತ್ತಿಯು ಇದರಿಂದ ಹೊರತೇನಲ್ಲ. ಮೂಲತಃ ಈ ದೇವಾಲಾಯವು ಕುರುಬ ಜನಾಂಗಕ್ಕೆ ಸೇರಿದ್ದು ಇಲ್ಲಿನ ಒಂದು ಅಂಕಣದ ಚಿತ್ರವು ಕುರುಬ ಜನಾಂಗದ ಮೂಲವನ್ನು ಸೂಚಿಸುವ ಸ್ವಾರಸ್ಯಕರ ವಿವರಣೆಯನ್ನು ನೀಡುವ ಚಿತ್ರವಾಗಿದೆ.

ಶಿವಪಾರ್ವತಿಯರ ಕಲ್ಯಾಣ ಮಹೋತ್ಸವದ ಸಂದರ್ಭದಲ್ಲಿ ಪಾರ್ವತಿಯ ಕೈಯಿಂದ ಒಂದು ತೊಟ್ಟು ಹಾಲು ಭೂಮಿಗೆ ಬೀಳಲು ಅದರಿಂದ ವ್ಯಕ್ತಿಯೊಬ್ಬನು ಸೃಷ್ಠಿಯಾಗುತ್ತಾನೆ. ಅವನನ್ನು ಆಡಿಕೊಂಡನೆಂದು ಕರೆದು ಭೂಲೋಕದಲ್ಲಿ ಹೇಮರೆಡ್ಡಿ, ಭೀಮರೆಡ್ಡಿ, ಅನುಪತೇಯ ರೆಡ್ಡಿ, ಆದಿಕೊಂಡ, ಮಲ್ಲಾರೆಡ್ಡಿ ಮತ್ತು ಒಕ್ಕಲು ಮುದ್ದಪ್ಪ ಎಂಬ ಐವರು ಸಹೋದರರೊಂದಿಗೆ ನೆಲೆಸುವಂತೆ ಮಾಡುತ್ತಾರೆ. ಆದರೆ ಆದಿಕೊಂಡನು ಭೂಲೋಕಕ್ಕೆ ಬಂದು ಯಾವುದೇ ಕೆಲಸ ಕಾರ್ಯವನ್ನು ಮಾಡದೆ ಉಂಡುಕೊಂಡು, ಆಡಿಕೊಂಡು, ಕಾಲಕಳೆಯಲು ಈ ಐವರು ಸಹೋದರರು ಅವನಿಗೆ "ವುಂಡಾಡುಪದ್ಮಪ್ಪ" ಎಂಬ

ಹೆಸರಿನಿಂದ ಕರೆಯುತ್ತಾರೆ. ಇತ್ತ ಪಾರ್ವತಿಯು ನೃತ್ಯ ಮಾಡಿ ದೇವೇಂದ್ರನನ್ನು ಮೆಚ್ಚಿಸಿ ಅವನಿಂದ ವರ ಪಡೆಯಲು ಅವನ ಆಸ್ಥಾನಕ್ಕೆ ಬಂದು ನಾಟ್ಯವಾಡುತ್ತಾಳೆ. ಆದರೆ ಪಾರ್ವತಿಯು ಮೈಮರೆತು ನೃತ್ಯಮಾಡುತ್ತಿದ್ದಾಗ ಅವಳ ಹೊಕ್ಕಳು ಕಾಣಿಸಿಕೊಳ್ಳಲು ಅಲ್ಲಿ ಆಸ್ಥಾನದಲ್ಲಿದ್ದ ದೇವಾನುದೇವತೆಗಳೆಲ್ಲ ನಗಲಾರಂಭಿಸಿದರು. ಇದರಿಂದ ಕೋಪಗೊಂಡ ಪಾರ್ವತಿಯು ಮುಂದೆ ನಕ್ಕವರೆಲ್ಲ ಮೂಢ ಕುರಿಗಳಾಗಲಿಯ ಹಿಂದೆ ನಕ್ಕವರು ಆಡುಗಳಾಗಲಿ ಎಂದು ಶಾಪವಿತ್ತಳು. ತಕ್ಷಣವೇ ದೇವೇಂದ್ರನ ಆಸ್ಥಾನದಲ್ಲಿದ್ದ ದೇವಾನು ದೇವತೆಗಳೆಲ್ಲ ಆಡು ಕುರಿಗಳಾಗುತ್ತಾರೆ. ಪಾರ್ವತಿಯು ಕೈಲಾಸಕ್ಕೆ ಹಿಂದಿರುಗಲು ಅವು ಸಹ ಹಿಂಬಾಲಿಸಿದವು, ಕೊನೆಗೆ ಕೈಲಾಸವಾಸಿಯಾದ ಶಿವನು ತನ್ನ ಪತ್ನಿಯ ಮೇಲಿನ ಅದಮ್ಯ ಪ್ರೀತಿಯಿಂದ ಅವಳ ತಪ್ಪನ್ನು ಮನ್ನಿಸಿ, ಅವಳ ಹಿಂದೆ ಬಂದ ಆಡುಕುರಿಗಳನ್ನು ತಾನೇ ಮೇಯಿಸಲು ಹೋಗುತ್ತಾನೆ. ಆದರೆ ಅದು ಅವನಿಂದ ಸಾಧ್ಯವಾಗಲಿಲ್ಲ, ನಂತರ ಗಣಪತಿ, ನಂದಿ, ಗಂಗೆ ಇವರೆಲ್ಲ ಮೇಯಿಸಿದರೂ ಸಾಧ್ಯವಾಗದೇ ಹೋಯಿತು. ಕೊನೆಗೆ ಶಿವನು ಇವುಗಳನ್ನು ತಮ್ಮ ಧಾರೆಯ ಪುತ್ರ ಆದಿಕೊಂಡನು ಸಾಕಲೆಂದು ತನ್ನ ತ್ರಿಶೂಲವನ್ನು ಭೂಮಿಗೆ ಹಾಕಿ ಗವಿಯೊಂದನ್ನು ಸೃಷ್ಟಿಸಿ ಅದರಲ್ಲಿ ಎಲ್ಲ ಕುರಿಗಳನ್ನು ತುಂಬುತ್ತಾನೆ. ಪಾರ್ವತಿಯು ಅಲ್ಲಿ ತಲೆಗೂದಲನ್ನು ಕಿತ್ತು ಹಾಕುತ್ತಾಳೆ. ಕ್ಷಣಾರ್ಧದಲ್ಲಿ ಅಲ್ಲಿ ದಟ್ಟವಾದ ಸೀಗೆಪೊದೆ, ಅದರಲ್ಲಿ ಹುತ್ತ ಪಕ್ಕದಲ್ಲಿ ಮುತ್ತುಗದ ಮರವೊಂದು ಬೆಳೆಯುತ್ತದೆ, ಕೆಲವು ಸಮಯದ ನಂತರ ಆದಿಕೊಂಡನನ್ನು ಪೋಷಿಸುತ್ತಿದ್ದ ಸಹೋದರರಿಗೆ ಆ ಪೊದೆಯಲ್ಲಿ ಕೆಟ್ಟ ಹುಳು ಹುಲಿಯೊಂದು ಕಾಣಿಸಿಕೊಳ್ಳಲು ಆ ಪೊದೆಗೆ ಬೆಂಕಿ ಇಡುವಂತೆ ಆದಿಕೊಂಡನಿಗೆ ಹೇಳುತ್ತಾರೆ. ಅದರಂತೆ ಅವನು ಬೆಂಕಿ ಇಟ್ಟಾಗ ತಾಪಕ್ಕೆ ತಾಳಲಾರದೆ ಅದರಡಿಯಲ್ಲಿದ್ದ ಗವಿಯಿಂದ ಕುರಿಗಳು, ಹುತ್ತದಲ್ಲಿದ್ದ ಹಾವುಗಳು ವೇಗವಾಗಿ ಹೊರಬರಲಾರಂಭಿಸಿದವು. ಶಿವನ ಇಚ್ಛೆಯಂತೆ ಅವು ಆದಿಕೊಂಡನ ಹಿಂದೆ ದುಂಬಾಲು ಬೀಳುತ್ತವೆ. ಇದಕ್ಕೂ ಮುಂಚೆ ಕುರಿಗಳೆಂಬ ಪ್ರಾಣಿಗಳೆ ಭೂಮಿಯ ಮೇಲಿರಲಿಲ್ಲ ಹೀಗಾಗಿ ಇವುಗಳನ್ನು ನೋಡಿದ ಕೂಡಲೆ ಜನರು ಗಾಬರಿಯಾಗಬಹುದೆಂದು ತಿಳಿದು ಆದಿಕೊಂಡನು ಅವುಗಳನ್ನು ಕಾಡಿಗೆ ಕರೆದೊಯ್ಯುತ್ತಾನೆ. ಕಾಡಿನಲ್ಲಿ ಒಂದು ದೊಡ್ಡ ರಾಕ್ಷಸಿ ಒರ್ವ ಸುಂದರಿಯನ್ನು ತಂದು ಸಾಕಿಕೊಂಡಿರುತ್ತದೆ, ವುಂಡಾಡುಪದ್ಮನು ಆ ರಾಕ್ಷಸಿಯನ್ನು ಕೊಂದು ಆಸುಂದರಾಂಗಿಯನ್ನು (ಮಾಳಮ್ಮ) ವಿವಾಹವಾಗುತ್ತಾನೆ. ತದನಂತರ ರಾಕ್ಷಸಿಯ ತಲೆ ಬುರುಡೆಯನ್ನು ಗಂಜಿಯ ಬಾನೆಲೆಯನ್ನಾಗಿ, ಮುಂಗೈಯನ್ನು ತೆಗೆದು ಲಾಳಿಯನ್ನಾಗಿ, ಕಾಲುಗಳಿಂದ ಕವಲನ್ನು, ಹಲ್ಲಿನಲ್ಲಿ ಕುಂಚಿಗೆಯನ್ನು, ಅಂಗೈನಲ್ಲಿ ತೊಡೆಕದರನ್ನು ಮಾಡಿ ಕೈಮಗ್ಗವೊಂದನ್ನು ತಯಾರಿಸಿಕೊಂಡು ಕುರಿಯ ತುಪ್ಪಟದಿಂದ ಕಂಬಳಿಯನ್ನು ನೇಯಲಾರಂಭಿಸುತ್ತಾನೆ. ಇಲ್ಲಿಂದ ಕುರುಬ ಜನಾಂಗವು ಉದಯಿಸಿತು. ಇದು ರೂಢಿಯಲ್ಲಿರುವ ಜನಪದ ಕತೆ.

ಕಲಾವಿದನು ಈ ಮೇಲಿನ ಕತೆಯನ್ನು ಆಧಾರವಾಗಿಟ್ಟುಕೊಂಡು ನರಸಿಂಹನ ಚಿತ್ರದ ಪಕ್ಕದ ಅಂಕಣದಲ್ಲಿ ಕುರುಬ ಜನಾಂಗದ ಮೂಲ ವಸ್ತುವಿಷಯವನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾನೆ. ಈ ಚಿತ್ರದಲ್ಲಿ

ದೊಡ್ಡದಾದ ಹುತ್ತವಿದ್ದು ಅದರೊಳಗಿಂದ ಹಾವುಗಳು ರಬಸವಾಗಿ ಹೊರಬರುತ್ತಿರುವುದು. ಜೊತೆಗೆ ಕುರಿಗಳು ಹೊರ ಬರುತ್ತಿರುವುದು, ಹುತ್ತದ ಮಧ್ಯದಲ್ಲಿ ಏಳುತಲೆಯುಳ್ಳ ಸರ್ಪ ಒಂದು ಎಡಕೆದರಿಕೊಂಡಿರುವುದು ಅದರ ತಲೆ ಮೇಲೆ ಬಂಗಾರದ ಕಿರೀಟದೋಪಾದಿಯಲ್ಲಿ ಮತ್ತು ಕೊರಳಿಗೆ ಕಂಠಹಾರವನ್ನು ರಚಿಸಲಾಗಿದೆ. ಹುತ್ತದ ಮಧ್ಯದಲ್ಲಿ ಸುಂದರವಾದ ಮುತುಕದ ಗಿಡವಿದ್ದು ಅದರಲ್ಲಿ ಅಳಿಲುಗಳು ಬಹು ಸಂಖ್ಯೆಯಲ್ಲಿ ಕಾಣುತ್ತವೆ. ಹಾಗೂ ಗಿಳಿಗಳು ಈ ಮರವನ್ನು ಆಶ್ರಯಿಸ ಹಾರಿ ಬರುತ್ತಿವೆ. ವುಂಡಾಡೊಪದ್ಮಪ್ಪ ಮತ್ತು ಅವನ ಪತ್ನಿ ಮಾಳಮ್ಮ ಸಮೇತರಾಗಿ ಕುರಿಕಾಯಲು ಹೊರಟಿದ್ದಾರೆ. ವುಂಡಾಡೊಪದ್ಮಪ್ಪನು ಉತ್ತಮ ಮೈಕಟ್ಟು ಹೊಂದಿದ್ದು ಜಟ್ಟಿಯಂತೆ ಕಂಗೊಳಿಸುತ್ತಿದ್ದಾನೆ, ತಲೆಗೆ ರುಮಾಲು, ಹಣೆಗೆ ವಿಭೂತಿ, ಕೊರಳಿಗೆ ಕಂಠಿಹಾರ, ತೊಳ್ಬಂಧಿ, ಕೈಕಡಗ, ಹೆಗಲ ಮೇಲೆ ಕರಿಕಂಬಳಿ ಹೊದ್ದು, ಹೆಗಲ ಮೇಲೆ ಕೊಡಲಿಯನ್ನು ಹೊತ್ತು ಗಾಂಭೀರ್ಯ ನಡಿಗೆಯಲ್ಲಿ ನಡೆಯುತ್ತಿದ್ದಾನೆ. ಹಿಂದೆ ಹೆಂಡತಿಯಾದ ಮಾಳಮ್ಮ ಸರ್ವಾಲಂಕಾರ ಭೂಷಿತಳಾಗಿ ತಲೆಯ ಮೇಲೆ ಹಸಿವುಪೂರೈಸಲು ಕೆಲವು ಆಹಾರವನ್ನು ಹೊತ್ತು ಹಿಂಬಾಲಿಸಿದ್ದಾಳೆ. ಇವಳೂ ಸಹಿತ ದಷ್ಟಪುಷ್ಟಳಾದ ದೇಹವನ್ನು ಹೊಂದಿದ್ದಾಳೆ. ಎಂದು ಅದೇ ಸ್ಥಳದಲ್ಲಿ ಕಲಾವಿದರು ಅಂದಿನ ಕುಲದಲ್ಲೇಯೆ ಬರೆಯಲಾಗಿದೆ. ಇವರ ಮುಂದೆ ಕುರಿಗಳ ಹಿಂಡು ಸಾಗಿದೆ. ಕೆಲವು ಕುರಿಗಳು ಮೇಯುತ್ತಿದ್ದರೆ ಟಗರು ಲೈಂಗಿಕ ಸುಖವನ್ನು ಪಡೆಯಲು ಹೆಣ್ಣನ್ನು ಆಲಿಂಗಿಸಿದೆ. ಹೆಣ್ಣು ಮದದಿಂದ ಮೇಲೇರಿದ ಗಂಡನ್ನು ಸ್ವಾಗತಿಸಿ ಲೈಂಗಿಕ ಸುಖವನ್ನು ನಿರೀಕ್ಷಿಸುತ್ತಿದೆ. ಮತ್ತೊಂದು ಟಗರು ಅದರ ಮೇಲೆ ಕಾಳಗಕ್ಕೆ ಇಳಿಯಲು ಸನ್ನದ್ದವಾಗಿದೆ. ಆದರೆ ಇದನ್ನು ಲೆಕ್ಕಿಸದೆ ತನ್ನ ಕ್ರಿಯೆಯಲ್ಲಿ ತೊಡಗಿದೆ. ಮತ್ತೆರಡು ಟಗರು ಶೌರ್ಯಪರಾಕ್ರಮವನ್ನು ಕಾದಾಡುವುದರ ಮೂಲಕ ಪ್ರದರ್ಶಿಸುತ್ತಿವೆ. ಹೀಗೆ ಪ್ರಾಣಿ ಸಹಜವಾದ ಕಾದಾಟವು ನಂತರ ಪ್ರೇಯಸಿಯ ಗೆದ್ದವರಿಗೆ ಎಂಬ ಕಾಡಿನ ನ್ಯಾಯ ಇಲ್ಲಿ ನೈಜವಾಗಿ ಚಿತ್ರಿತವಾಗಿದೆ.

ಇದೇ ಅಂಕಣದಲ್ಲಿ ಮುಮ್ಮಡಿಯವರು ಸುಂದರ ಅಲಂಕಾರ ಖಚಿತವಾದ ಕುದುರೆಯನ್ನೇರಿ ಸವಾರಿ ಹೊರಟಿದ್ದಾರೆ. ಗಿರಿಜಾ ಮೀಸೆಯ ಒಡೆಯರು ಉದ್ದನೆಯ ನಿಲುವಂಗಿ, ದೋತ್ರ ಉಟ್ಟಿದ್ದಾರೆ. ಅಂಗಿಯು ಚಿಕ್ಕ ಚಿತ್ತಾರದಿಂದ ಕೂಡಿದೆ. ತಲೆಯ ಮೇಲೆ ಟೂಪ್ಪಿಗೆಯನ್ನು ಧರಿಸಿದ್ದಾರೆ. ಇವರ ಹಿಂದೆ ಛತ್ರಿ ಹಿಡಿದು ಸೇವಕನು ಒಡೆಯರನ್ನು ಹಿಂಬಾಲಿಸಿದ್ದಾನೆ. ಈತನು ಉದ್ದನೆಯ ನಿಲುವಂಗಿ, ತಲೆಯ ಮೈ ಬಿಗಿಯಾದ ಪೈಜಾಮು ಟೋಪಿ ಕೈಯಲ್ಲಿ ಛತ್ರಿ ಹಿಡಿದಿದ್ದಾನೆ. ಈ ದೃಶ್ಯವು ನಗರ ವೀಕ್ಷಣೆಗೆ ಹೊರಟಂತೆ ಕಾಣುತ್ತದೆ.

ಗೋಡೆಯ ಸುತ್ತ ಮೇಲ್ಭಾಗದಲ್ಲಿ ಆನೆ ಮತ್ತು ಕುದುರೆಗಳ ಸಾಲು ಹಾಗೂ ಮೂರು ಕುದುರೆಗಳು ತನ್ನ ಮುಂಗಾಲುಗಳನ್ನು ಮೇಲೆತ್ತಿ ಚಲಿಸುತ್ತಿವೆ. ಸವಾರಿಗರು ಕತ್ತಿಗಳನ್ನು ಮೇಲೆತ್ತಿ ಯುದ್ಧ ಮಾಡುವ ಹುರುಪಿನಿಂದ ಮುನ್ನುಗ್ಗುವ ರೀತಿ ಚಿತ್ರಿಸಲಾಗಿದೆ. ಮುಂದಿನ ಸಾಲು ಕಾಲಾಳುಗಳು, ಕೈಯಲ್ಲಿ ಭರ್ಚಿ ಮತ್ತು ಖಡ್ಗವನ್ನು ಹಿಡಿದಿದ್ದಾರೆ. ಖಡ್ಗವನ್ನು ಹಿಡಿದಿರುವ ಮೂವರು ರಣಭೇರಿಯನ್ನು ಪೋಷಿಸುತ್ತ

ಖಡ್ಗವನ್ನು ಮೇಲೆತ್ತಿ ಬಿರುಸಿನಿಂದ ಸಾಗಿದ್ದಾರೆ. ಮುಂದೆ ಅತ್ಯಾಲಂಕಾರಗೊಂಡ ಕುದುರೆ ಏರಿ ಅರಸನ ವೇಷಧಾರಿ ಮುಂದೆಸಾಗಿದ್ದು ಮುಮ್ಮಡಿ ಕೃಷ್ಣರಾಜ ಒಡೆಯರಂತೆ ಚಿತ್ರಿಸಲಾಗಿದೆ. ಛತ್ರಿ ಛಾಮರವನ್ನು ಹಿಡಿದು ಸೇವಕರು ಹಿಂಬಾಲಿಸಿದ್ದಾರೆ. ಒಡೆಯರ ಮುಂದೆ ಇಬ್ಬರು ಸೇವಕರು ಮುನುಗ್ಗಿದ್ದಾರೆ. ಇವರ ಎದುರಿಗೆ ಸರ್ವಾಲಂಕಾರ ಭೂಷಿತರಾದ ಇಬ್ಬರು ನರ್ತಕಿಯರು, ವಾದ್ಯಗಾರರು ಒಬ್ಬ ಘಟವನ್ನು ಬಾರಿಸಿತಿದ್ದು, ಇಬ್ಬರು ಡೋಲು ಬಾರಿಸುತ್ತಾ ಒಬ್ಬನು ಕಹಳೆ ಊದಿಕೊಂಡು ಬರುತ್ತಿರುವ ಯೋಧರನ್ನು ಸ್ವಾಗತಿಸುತ್ತಿದ್ದಾರೆ. ಈ ಸನ್ನಿವೇಶವು ಯುದ್ಧದಲ್ಲಿ ಗೆದ್ದವರನ್ನು ಸ್ವಾಗತಿಸುತ್ತಿರುವ ಹಾಗೆ ಭಾಸವಾಗುತ್ತದೆ. ಈ ಸಾಲಿನ ಹಿಂಭಾಗದಲ್ಲಿ ತಲೆಗೆ ಪೇಟವನ್ನು ಅದು ಬೀಳದಂತೆ ಒಂದು ಪಟ್ಟಿಯನ್ನು ಬಿಗಿಯಾಗಿ ಕತ್ತಿಗೆ ಕಟ್ಟಿದ್ದಾರೆ. ಅಂಗಿ ಧರಿಸದೇ ಮೊಣಕಾಲಿನವರೆಗೆ ಚಡ್ಡಿಯನ್ನು ಮಾತ್ರ ಧರಿಸಿದ್ದು ಸೊಂಟ್ಟಕ್ಕೆ ಬಿಗಿದ ಅಂಗವಸ್ತ್ರವು ಮೈ ಮೇಲೆ ಹಾದು ಹೋಗಿದೆ. ಎಲ್ಲರ ಕೈಯಲ್ಲೂ ಈಟಿಯನ್ನು ಹಿಡಿದು ಶಿಸ್ತಿನ ಸಿಪಾಯಿಗಳಂತೆ ಸಾಗಿದ್ದಾರೆ.

ರಂಗಾಪುರದ ಶ್ರೀ ರಂಗನಾಥ ದೇವಾಲಯದ ಗರ್ಭಗುಡಿಯ ಮುಂಭಾಗದ ತೊಲೆಯೊಂದರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ದರ್ಬಾರಿನ ಸನ್ನಿವೇಷವಿದ್ದು ಒಂದೆಡೆ ಮಂತ್ರಿವರ್ಯರು, ಆಳುಕಾಳುಗಳು ಜನಸಾಮಾನ್ಯರು ಕೈಕಟ್ಟಿ ವಿನಮ್ರತೆಯಿಂದ ನಿಂತು ಒಡೆಯನ ಅಪ್ಪಣೆಗಾಗಿ ಕಾಯುತ್ತಿದ್ದಾರೆ. ಎಲ್ಲರು ರಾಜ ಪೋಷಾಕಿನಿಂದ ಕೂಡಿದ್ದಾರೆ, ಗಿರಿಜಾ ಮೀಸೆಯ ಒಡೆಯರು ಸಿಂಹಾಸನಾರೂಢರಾಗಿ ಉದ್ದನೆಯ ಹಸಿರು ಬಣ್ಣದ ನಿಲುವಂಗಿ, ನೀಲಿ ಪೈಜಾಮು ಮೂತಿಬೂಟ್ ಹಾಕಿದ್ದಾರೆ. ಎಡಗೈಯಲ್ಲಿ ಖಡ್ಗ ಹಿಡಿದಿದ್ದಾನೆ. ಚಾಮರದಾರಿ ಚಾಮರ ಬೀಸುತಿದ್ದಾನೆ. ಬಂದೂಕು ಹಿಡಿದ ಸಿಪಾಯಿಗಳು, ಜನಸಾಮಾನ್ಯರು ಹಾಜರಿದ್ದಾರೆ.

ಇದೇ ಚಿತ್ರದ ಅಕ್ಕ ಪಕ್ಕದಲ್ಲಿ ಕಂಬಗಳ ಮೇಲೆ ದೊಡ್ಡ ಗಾತ್ರದ ಹುಲಿಯನ್ನು ಚಿಕ್ಕಗಾತ್ರದ ವ್ಯಕ್ತಿಯೋರ್ವನು ತನ್ನ ಬಾಕುವಿನಿಂದ ಅದರ ಬಾಯಿಗೆ ಚುಚ್ಚುತ್ತಿದ್ದಾನೆ. ಈ ಚಿತ್ರವು ಟಿಪ್ಪುವಿನ ವೀರ ರಸವನ್ನು ಹೇಳುತ್ತದೆ. ಈ ವ್ಯಕ್ತಿಯ ಮುಖಭರ್ಯೆಯು ಟಿಪ್ಪುವಿನ ಹೋಲಿಕೆಗೆ ಹತ್ತಿರವಾಗಿದೆ, ಮತ್ತೊಂದು ಮಗ್ಗುಲಲ್ಲಿ ಹುಲಿ ಮಾತ್ರ ಚಿತ್ರಿಸಿಲಾಗಿದೆ. ಹುಲಿಯು ಬೇಟೆಗಾಗಿ ಕಾದಿದೆ. ಹುಲಿಯ ಆಕಾರದಲ್ಲಿ ಎಲ್ಲಿಯೂ ಎಚ್ಚರ ತಪ್ಪಿಲ್ಲ ಇಂತಹ ಕೆಲವು ಕಲಾಕೃತಿಗಳು ರಂಗಾಪುರದಲ್ಲಿದ್ದರೆ ಕೆರೆಗೋಡಿಯಲ್ಲಿ ವ್ಯಕ್ತಿಯೋರ್ವನು ತಲೆಗೆ ರುಮಾಲು ಕಟ್ಟಿ, ಒಂದು ಪಂಚೆ ಕಟ್ಟಿ ಕೈಮುಗಿದು ನಿಂತಿದ್ದಾನೆ. ಇವನ ಪಕ್ಕದಲ್ಲಿ ಬುಟ್ಟಿಯಲ್ಲಿ ಬಾಳೆಹಣ್ಣುಗಳನ್ನು ಚಿತ್ರಿಸಲಾಗಿದೆ. ಈ ಚಿತ್ರದ ಹಿಂದೆ ಕೆಲವು ವಿವರಗಳನ್ನು ಬರೆಯಲಾಗಿದೆ. ದುರ್ದೈವದಿಂದ ಅವುಗಳು ಹಾಳಾಗಿವೆ ಆ ವಿವರವು ಏನೆಂಬುದು ತಿಳಿಯುತ್ತಿಲ್ಲ. ಈ ಚಿತ್ರವು ಮುಖ್ಯದ್ವಾರದ ಬಲಬದಿಯಲ್ಲಿದೆ. ಇದರ ಪಕ್ಕದಲ್ಲಿ ಮತ್ತೊಂದು ಚಿತ್ರವು ಅಲಂಕೃತ ಕುದುರೆಯನ್ನೇರಿ ಗಡ್ಡಧಾರಿಯಾದ ವ್ಯಕ್ತಿಯು ತಲೆಗೆ ಇಸ್ಲಾಂಧರ್ಮದ ಹೋಲಿಕೆ ಇರುವ ಟೊಪ್ಪಿಗೆ, ಕೈಯಲ್ಲಿ ನವಿಲುಗರಿ ಹಾಗೂ ಚಾಮರವನ್ನು ಹಿಡಿದಿದ್ದಾನೆ. ಅಂದು ನಗರ ಜನರ

ಸ್ಥಿತಿಗತಿಗಳನ್ನು ಕಷ್ಟಸುಖಗಳನ್ನು ನೇರವಾಗಿ ತಿಳಿಯುವ ಸಲುವಾಗಿ ಅರಸರು ವೇಷಮರೆಸಿಕೊಂಡು ನಗರ ವೀಕ್ಷಣೆ ಬರುತ್ತಿದ್ದುದು ವಾಡಿಕೆ ಇತ್ತು. ಈ ಚಿತ್ರವು ಅದೇ ಇದ್ದು ಮತ್ತೊಂದು ಊಹೆಗೆ ಪುಷ್ಠಿ ನೀಡುತ್ತದೆ.

ಎಡಭಾಗದ ಗೋಡೆ ಮೇಲಿನ ಚೌಕದ ಪಟ್ಟಿಕೆಯಲ್ಲಿ ದಂಪತಿ ಇಬ್ಬರು ದೇವರಲ್ಲಿ ಭಕ್ತಿಯಿಂದ ಕೈ ಮುಗಿದು ನಿಂತಿದ್ದಾರೆ. ಈ ಚಿತ್ರವೂ ಸಹಿತ ಹಾಳಾಗಿರುವುದರಿಂದ ಇದರ ಯಾವುದೇ ಗುಣಲಕ್ಷಣಗಳು ಕಾಣುವುದಿಲ್ಲ. ಇದರ ಪಕ್ಕದಲ್ಲಿ ಒಂದು ಲೈಂಗಿಕ ಚಿತ್ರವಿದ್ದು, ಅದು ದೇವಾಲಯದಲ್ಲಿ ಇರಬಾರದು ಎಂಬ ಕಾರಣಕ್ಕೆ ಕೆರೆದು ಹಾಕಿದ್ದಾರೆ. ಅದರ ಇರುವಿಕೆಯು ಮಾತ್ರ ಗೋಚರಿಸುತ್ತದೆ.

ಅಮೃತೂರಿನ ಪಟಾಲದಮ್ಮ ದೇವಾಲಯದಲ್ಲಿ ರಚಿತವಾಗಿರುವ ಭಿತ್ತಿ ಚಿತ್ರಗಳು ಸಾಮಾಜಿಕ ಜೀವನಕ್ಕೆ ಸಂಬಂಧಿಸಿದ ಚಿತ್ರವಾಗಿದೆ. ದೇವರ ಪ್ರತಿಷ್ಠಾನದ ಹಿಂಬದಿ ಗೋಡೆಯ ಅಂಚಿನಲ್ಲಿ ಹೆಂಗಳೆಯರು ಸಾಲಾಗಿ ತಲೆಯ ಮೇಲೆ ಕೊಡವನ್ನು ಹೊತ್ತು ನಡೆಯುತ್ತಿದ್ದಾರೆ. ಈ ಸಾಲಿನಲ್ಲಿ ಸಾಂಪ್ರದಾಯಿಕ ಉಡುಗೆಯನ್ನು, ಸ್ತ್ರೀ ಪುರುಷರು ತೊಟ್ಟು ಯಾರನ್ನೋ ಸ್ವಾಗತಿಸುತ್ತಿರುವಂತೆ ಭಾಸವಾಗುತ್ತದೆ. ಅದೇ ಸಾಲಿನಲ್ಲಿ ಕುದುರೆ ಏರಿ ಗಣ್ಯವಕ್ತಿಯೊಬ್ಬನು ಬರುತ್ತಿದ್ದಾನೆ. ಈ ಚಿತ್ರಗಳು ಸೇರಿದಂತೆ ಹಾಳಾಗಿರುವುದರಿಂದ ಅವುಗಳ ಯಾವುದೇ ಗುಣಲಕ್ಷಣಗಳನ್ನು ತಿಳಿಯಲು ಸಾಧ್ಯವಾಗಿಲ್ಲ.

ಸಿಬಿ ದೇವಾಲಯದ ರಾಜಗೋಪುರದ ಮೇಲ್ಛಾವಣಿಯಲ್ಲಿ ಎರಡು ರೀತಿಯ ಚಿತ್ರಗಳಿದ್ದು ಅದರಲ್ಲಿ ಮಧ್ಯದ ಅಂಕಣವು ಸಾಮಾಜಿಕ ಜೀವನಕ್ಕೆ ಸಂಬಂಧಿಸಿದ ನಿಸರ್ಗ ಚಿತ್ರವಾಗಿದ್ದು, ಇದರ ಎಡ ಬಲ ಭಾಗದ ಛಾವಣಿ ಮತ್ತು ದೂಲಗಳಲ್ಲಿ ಲೈಂಗಿಕ ಚಿತ್ರಗಳನ್ನು ಚಿತ್ರಿಸಲಾಗಿದೆ. ದೇವಾಲಯದಲ್ಲಿ ಲೈಂಗಿಕ ಚಿತ್ರಗಳು ಪ್ರಸ್ತುತವೇ? ಅಪ್ರಸ್ತುತವೇ? ಎನ್ನುವುದು ಎರಡು ಪ್ರಶ್ನೆಗಳಾಗಿ ಮುಂದೆ ನಿಲ್ಲುತ್ತವೆ. ಏಕೆಂದರೆ ಲೈಂಗಿಕತೆಯು ಸಾರ್ವತ್ರಿಕವಾಗಿ ಅನುಭವಿಸುವ ಭೋಗದಲ್ಲಿ ಅದು ತೆರೆಮರೆಯಲ್ಲಿದ್ದರೆ ಚೆನ್ನ ಎನ್ನುವುದು ಕೆಲವರ ಅಭಿಪ್ರಾಯ. ಆದರೆ ದೇವಾಲಯಗಳಲ್ಲಿ ಲೈಂಗಿಕ ಚಿತ್ರ ಶಿಲ್ಪಗಳನ್ನು ರಚಿಸಿರುವುದು ಪ್ರಾಚೀನ ಕಾಲದಿಂದ ಸಮಾನತೆಯ ಸಂಕೇತವಾಗಿ ಮೂಡಿಬಂದಿದೆ. ಕಾಮ ಮಾನವನ ಒಂದು ಸಹಜ ಪ್ರವೃತ್ತಿ. ಮೋಕ್ಷಕ್ಕೆ ಸಹಾಯಕವಾಗುವ ಪುರುಷಾರ್ಥ. ಸ್ತ್ರೀ-ಪುರುಷ ರೀರ್ವರು ಪರಸ್ಪರ ಆಕರ್ಷಣೆಯಿಂದ ಮುಕ್ತರಾದ ಮಾನವರಿಲ್ಲ ದೇವಾಲಯದಲ್ಲೇ ಯಾಕೆ? ಈ ಚಿತ್ರ ಶಿಲ್ಪಗಳು ಇರುತ್ತವೆ ಎಂದು ಅನಿಸಬಹುದು.

ದೇವಾಲಯವು ಸರ್ವರಿಗೂ ಭಕ್ತಿಯ ಭಯದ ಹಾಗೂ ಪಾವಿತ್ರತೆಯ ಸಂಕೇತ. ಲೈಂಗಿಕತೆಯು ಕೆಲವರ ಅಭಿಪ್ರಾಯದಂತೆ ಮುಕ್ತವಾಗಿರದೆ ಭಯ, ಸಂಕೋಚ, ಆಲಸ್ಯದಿಂದ ಕೂಡಿರುವವರಿಗೆ ಹಾಗೂ ಸದಾ ಕಾಲ ಸುರಪಾನ, ಸೂಳೆಗೇರಿಯ ರಂಜನೆಗಳಲ್ಲಿ ಆಸಕ್ತರಾಗಿ ದೇವಾಲಯದತ್ತ ತಿರುಗಿ ನೋಡದವರಿಗಾಗಿಯೇ ಈ ಚಿತ್ರಗಳು ರಚನೆಯಾಗಿರಬೇಕು ಎನ್ನುವ ಹಲವಾರು ಪ್ರಶ್ನೆಗಳು ಉದ್ಭವಿಸುತ್ತವೆ.

ಅದು ಏನೇ ಇರಲಿ ಕಲಾವಿದನು ತನ್ನ ಇತಿಮಿತಿಯಲ್ಲಿ ಎಲ್ಲಾ ಚಿತ್ರಗಳನ್ನು ವ್ಯಕ್ತಪಡಿಸಿದ್ದಾನೆ. ಚಿತ್ರಗಳಲ್ಲಿ ವ್ಯಕ್ತಪಟ್ಟಿರುವ ಅವನ ಕಲ್ಪನಾಶಕ್ತಿ, ವರ್ಣ ವಿನ್ಯಾಸ, ಕುಂಚದ ಮೇಲಿನ ಹಿಡಿತ ಅವನ ಸೃಜನ ಶೀಲತೆಯ ಪ್ರತೀಕ.

ಇಲ್ಲಿನ ರತಿ ಕ್ರೀಡೆಯಲ್ಲಿ ಪಾಲ್ಗೊಂಡ ಸ್ತ್ರೀ-ಪುರುಷರು ವಸ್ತ್ರದಾರಿಯಾಗಿ ಆಭರಣಗಳಿಂದ ಅಲಂಕರಿಸಿಕೊಂಡಿರುವ ಸ್ತ್ರೀಯರು ಸಮಕಾಲೀನ ಪೋಷಾಕುಗಳನ್ನು ಧರಿಸಿದ್ದಾರೆ. ಕೇಶರಾಶಿಯನ್ನು ಜಡೆಯಾಗಿ, ತುರುಬಾಗಿ ಹಾಗೆಯೇ ಹರಡಿಕೊಂಡು ಕೆಲವೆಡೆ ಟೋಪಿಯನ್ನು ಧರಿಸಿರುವುದು ಉಂಟು, ತಲೆಗೆ ತುರುಬಿಲ್ಲೆ, ಬೈತಲೆ ಬಟ್ಟು, ಕಿವಿಗೆ ಬೆಂಡೋಲೆ ಕೊರಳಿಗೆ ಕಂಠೀಹಾರ, ಕೈಗೆ ಬಳೆ, ಕಾಲಿಗೆ ಕಡಗ ಕಾಲಿಂದಿಗೆ, ಉದ್ದನೆಯ ನಿಲುವಂಗಿ, ಕೆಲವೆಡೆ ಬಿಗಿಯಾದ ಕುಪ್ಪಸ ಸೀರೆಗಳನ್ನು ಧರಿಸಿದ್ದಾರೆ. ಪುರುಷನು ನಿಲುವಂಗಿ, ಪೈಜಾಮ, ತಲೆಗೆ ಪೇಟ ಧರಿಸಿದ್ದಾನೆ. ರತಿಕ್ರೀಡೆಗೆ ಪೂರಕವಾಗುವಂತೆ ಕೋಣೆಯ ವಾತಾವರಣ ಮಲಗಲು ಮೆತ್ತನೆಯ ಹಾಸಿಗೆ, ಒರಗಿಕೊಳ್ಳಲು ದಿಂಬು ಇವುಗಳನ್ನು ನಕ್ಷೆಯಿಂದ ಅಲಂಕರಿಸಲಾಗಿದೆ. ಹಾಸಿಗೆಯ ಮೇಲುಬಟ್ಟೆಯು ಕಸೂತಿ ಚಿತ್ತಾರದಿಂದ ಆಕರ್ಷಕ ಚಿತ್ರವನ್ನು ರಚಿಸಲಾಗಿದೆ. ಇವೆಲ್ಲವು ಕಲಾವಿದನ ಅಲಂಕಾರಿಕ ಪ್ರಜ್ಞೆಯನ್ನು ಮೆಚ್ಚಲೇಬೇಕು.

ಇಲ್ಲಿನ ಚಿತ್ರಗಳ ವಿಶೇಷವೆಂದರೆ ಸ್ತ್ರೀಪುರುಷರು ವಸ್ತ್ರಧಾರಿಗಳಾಗಿಯೇ ಲೈಂಗಿಕ ಕ್ರಿಯೆಯಲ್ಲಿ ತೊಡಗಿದ್ದಾರೆ. ಅಲ್ಲಲ್ಲಿ ನಿರ್ವಸ್ತ್ರಧಾರಿಗಳು ಕಾಣುತ್ತಾರೆ. ಹಾಗೂ ಸ್ತ್ರೀ ಪುರುಷರ ರತಿಕ್ರಿಯೆಯು ಸುಮಾರು ಐವತ್ತಕ್ಕೂ ಹೆಚ್ಚು ಭಂಗಿಗಳನ್ನು ಚಿತ್ರಿಸಲಾಗಿದೆ. ಪ್ರತಿಯೊಂದು ಚಿತ್ರವು ಒಂದಕೊಂದು ಭಿನ್ನವಾಗಿವೆ. ರತಿಕ್ರೀಡೆಯು ನಿಂತು, ಕುಂತು, ಮಲಗಿ, ಬಗ್ಗಿ, ಹಿಂದೆಯಿಂದ ಮುಂದೆಯಿಂದ, ತೂಗುಉಯ್ಯಾಲೆಯ ಮೇಲೆ, ಮಂಚದ ಮೇಲೆ, ಇಬ್ಬರು ಸ್ತ್ರೀಯರು ಒಬ್ಬಪುರುಷನು, ಇಬ್ಬರು ಪುರುಷರು ಒಬ್ಬಳೇ ಸ್ತ್ರೀ ಜೊತೆಗೂಡಿ, ಸ್ತ್ರೀ ನಾಯಿ, ಕುದುರೆ, ಬೆಕ್ಕು ಮುಂತಾದ ಪ್ರಾಣಿಗಳೊಂದಿಗೆ ತನ್ನ ಯೌವ್ವನವನ್ನು ಹಾಗೂ ಕಾಮದಾಹವನ್ನು ಈಡೇರಿಸಿಕೊಳ್ಳುವ ವಿವಿಧ ಭಂಗಿಗಳು ಇಲ್ಲಿ ಚಿತ್ರಿಸಲಾಗಿದೆ. ಸ್ತ್ರೀಯ ಸೌಂದರ್ಯವನ್ನು ಅವಳ ತುಂಬು ಸ್ತನಗಳು ಬಳುಕುವ ದೇಹ, ಮೈತುಂಬ ಆಭರಣ, ತೆಳುವಾದ ವಸ್ತ್ರಗಳಿಂದ ಹಲವು ಬಗೆಯ ಕೇಶಾಲಂಕಾರಗಳಿಂದ ಅಲಂಕರಿಸಿರುವುದು ಪುರುಷನ ಕಾಮದಾಹವು ಕೆರಳುವ ಹಾಗೆ ಮಾಡಿದೆ ಅವಳ ಯೌವ್ವನ ಮತ್ತು ದೇಹ ಸೌಂದರ್ಯ ಪುರುಷನನ್ನು ಆಕರ್ಷಿಸಿದೆ. ಸಲಿಂಗ ಕಾಮಿಗಳಿಗೂ ಆಧ್ಯತೆ ನೀಡಲಾಗಿದೆ. ಸ್ತ್ರೀಯು ವಿಶೇಷವಾಗಿ ದೊಡ್ಡದಾದ ಮೂಗುತಿಯನ್ನು ಧರಿಸಿರುವುದು ಕಂಡು ಬರುತ್ತದೆ. ಈ ಎಲ್ಲಾ ಚಿತ್ರಗಳು ಗಾಢವಾದ ಕೆಂಪು ಬಣ್ಣದ ಹಿನ್ನೆಲೆಯಿಂದ ಕೂಡಿದೆ. ಕೆಂಪು, ಪ್ರೇಮ,ದಾಹ, ಆಕ್ರೋಶಗಳನ್ನು ಸೂಚಿಸುವ ಬಣ್ಣವಾಗಿದ್ದು, ರತಿಕ್ರೀಡೆಗೆ ಹೊಂದಿಕೆಯಾಗುವಂತಿದೆ. ಈ ಎಲ್ಲಾ ಚಿತ್ರಗಳು ಚಿಕ್ಕ ಚಿಕ್ಕ ಚೌಕಗಳಿಂದ ಕೂಡಿದೆ.

ಈ ತೆರನಾದ ಲೈಂಗಿಕ ಚಿತ್ರಗಳು ತುಮಕೂರಿನ ನಲ್ಲಪ್ಪನವರ ಮನೆಯ ಶಯನ ಗೃಹದಲ್ಲಿ ಇದೇ ಮಾದರಿಯ ಲೈಂಗಿಕ ಚಿತ್ರಗಳು ಚಿತ್ರಿಸಿದ್ದು. ನಲ್ಲಪ್ಪನವರು ರಸಿಕತೆಯಿಂದ ಕೂಡಿದ್ದರು

ಎನ್ನಲಾಗಿದೆ. ದೇವಾಲಯಗಳ ವಾಸ್ತುಶಿಲ್ಪಗಳಲ್ಲಿ ಒಂದಾದರೊಂದು ರೀತಿಯಲ್ಲಿ ಲೈಂಗಿಕ ಚಿತ್ರಗಳನ್ನು ಸೇರಿಸದೆ ಇರುವುದಿಲ್ಲ. ಉದಾ:- ಬೇಲೂರು, ಹಳೇಬೀಡು, ಹಂಪಿ, ಬಳ್ಳಿಗಾವಿ, ಭಟ್ಕಳ ಹಾಗೂ ಜಿಲ್ಲೆಯ ಸ್ಥಳೀಯ ದೇವಾಲಯಗಳಲ್ಲಿ (ಗುಬ್ಬಿ ಚನ್ನಬಸವೇಶ್ವರ) ಕಾಣುತ್ತೇವೆ.

ಹೀಗೆ ಹಲವಾರು ವಿಷಯಗಳನೊತ್ತ ಹಲವಾರು ವಸ್ತು ವಿಷಯಗಳ ಹಿನ್ನೆಲೆಯ ಚಿತ್ರಗಳು ಕಲಾವಿದನ ಕಣ್ಣಿಗೆ ಹೇಗೆ ಕಾಣುತ್ತವೆಯೋ ಹಾಗೆಯೇ ಆ ಪ್ರದೇಶಕ್ಕೆ ಹೊಂದಿಕೆಯಾಗುವ ಹಾಗೆ ಚಿತ್ರಿಸುವುದು ಕಲಾವಿದನ ಜಾಣ್ಮೆ. ಏಕೆಂದರೆ ಯಾರೇ ಕಲಾ ಪೋಷಕರು ತಮಗೆ ಇಷ್ಟವಾದ ರೀತಿಯಲ್ಲಿ ಇದ್ರೆ ಮಾತ್ರ ಆ ಕಲಾಕೃತಿಯನ್ನು ಮೆಚ್ಚುತ್ತಾರೆ. ಹೊಗಳುತ್ತಾರೆ, ಪ್ರೋತ್ಸಾಹಿಸುತ್ತಾರೆ. ಆದಕಾರಣ ಕಲಾವಿದನು ಕಲಾ ಪೋಷಕರಿಗೆ ಇಷ್ಟವಾಗೋ ರೀತಿಯಲ್ಲಿ ಕಲಾಕೃತಿಯನ್ನು ರಚಿಸುವುದು ಕಲಾವಿದನಿಗೆ ಕರಗತವಾಗಿರುತ್ತದೆ. ಇಲ್ಲವಾದರೆ ಕಲಿಯುತ್ತಾನೆ. ಕಲಾವಿದನಿಗೆ ಸಮಾಜದಲ್ಲಿ ದಿನ ನಿತ್ಯದ ಬದುಕು ಅವನ ಸ್ಮೃತಿಪಟಲದಲ್ಲಿ ಸೆರೆಯಾಗಿರುತ್ತವೆ ಅವು ಕಾಲಬಂದಾಗ ಗೋಚರಿಸುತ್ತವೆ. ಆತನೇ ನಿಜವಾದ ಕಲಾವಿದ ಅವನು ಎಲ್ಲರನ್ನು ಸುಲಭವಾಗಿ ಗೆಲ್ಲುತ್ತಾನೆ. ವಿಜಯನಗರದ ಕಲಾವಿದರು ತಮ್ಮ ರಾಜನ ಅಭಿರುಚಿಯಂತೆ ಚಿತ್ರಗಳನ್ನು ರಚಿಸಿ ಅವರ ಮೆಚ್ಚುಗೆಯನ್ನು ಪಡೆದಿದ್ದರು. ಈ ಭಾಗ ಮರಾಠರ ಆಳ್ವಿಕೆಯಲ್ಲಿದ್ದಾಗ ಮರಾಠಿ ರಾಜರ ಮನಒಲಿಸಲು ಮರಾಠಿ ರೀತಿ, ನೀತಿ, ಸಂಸ್ಕೃತಿ, ಉಡುಗೆ ತೊಡುಗೆಗಳನ್ನು ರಚಿಸುವುದನ್ನು ಕಲಿತರು. ಬ್ರಿಟೀಷರು ಪ್ರವೇಶಿಸಿದ ನಂತರ ಭಾವಚಿತ್ರಗಳನ್ನು ಅವರಿಂದ ಕಲಿತರು. ಹೀಗೆ ಕಲಾವಿದನು ಆಯಾ ಪ್ರದೇಶದ ಚಲನವಲನಗಳನ್ನು ಅಲ್ಲಿನ ಚಿತ್ರದಲ್ಲಿ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾನೆ.

## ಅಡಿಟಿಪ್ಪಣಿ

೧. ಡಾ.ಎನ್.ನಂದೀಶ್ವರ್, ಸಿರಾ ತಾಲ್ಲೂಕಿನ ಸ್ಮಾರಕಗಳು ಹಾಗೂ ಶಾಸನಗಳು

೨. ಸಿ.ವೆಂಕಟೇಶ್, ಕಲ್ಪಸಿರಿ, ಪುಟ-೧೬೩





ಫೌಜುದಾರ ನಲ್ಲಪ್ಪ ಸಿಬಿ



ಸಾಮಾಜಿಕ ಭಿತ್ತಿಚಿತ್ರ - ಸಿಬಿ



ಲೈಂಗಿಕ ಭಿತ್ತಿಚಿತ್ರಗಳು – ಸಿಬಿ





ಸಾಮಾಜಿಕ ಭಿತ್ತಿಚಿತ್ರ – ಸಿರ



ಯೋಗಮಾಧವ ದೇವಾಲಯ - ಶೆಟ್ಟಿಕೆರೆ



ಚನ್ನಕೇಶವ ದೇವಾಲಯ - ಹರಳಗುಪ್ಪೆ

# ಭಿತ್ತಿ ಚಿತ್ರಗಳ ಮೇಲಾದ ಪ್ರಭಾವ, ಪ್ರೇರಣೆ, ತಂತ್ರಗಾರಿಕೆ ಶೈಲಿ

## ಪ್ರಭಾವ

ಪ್ರತಿಯೊಂದು ಕಲೆಗೂ ಒಂದಲ್ಲಾ ಒಂದರ ಪ್ರಭಾವ ಇದ್ದೇ ಇರುತ್ತದೆ. ಕಲೆಯು ಹುಟ್ಟಿದ್ದೇ ಸಂತೋಷಕ್ಕಾಗಿ. ಪ್ರಾಗಿತಿಹಾಸ ಚಿತ್ರಕಲೆಗೆ ಪ್ರಕೃತಿಯಲ್ಲಿ ತಾನು ಕಂಡ ಪ್ರಾಣಿ ಪಕ್ಷಿ ಗಿಡ, ಮರ, ಸೂರ್ಯ, ಚಂದ್ರ ಇತ್ಯಾದಿಗಳು ಆದಿಮಾನವನಿಗೆ ಪ್ರೇರಣೆಯಾದವು. ಅವುಗಳ ಸೌಂದರ್ಯ, ಆಕರ್ಷಣೆ ಕಲೆಗೆ ಸ್ಫೂರ್ತಿಯಾಯಿತು. ಆದಿಮಾನವನಿಂದ ಇಂದಿನವರೆಗೂ ಒಂದರ ಪ್ರೇರಣೆ, ಸ್ಫೂರ್ತಿ ಮತ್ತೊಂದಕ್ಕೆ ಇರುವುದು ಸಹಜವಾಗಿದೆ. ಈ ಬೆಳವಣಿಗೆಯು ಮುಂದುವರೆದಂತೆ ಭಿತ್ತಿ ಚಿತ್ರ ಕಲೆಗೆ ಇದೇ ಮಾದರಿಯ ಪ್ರೇರಣೆ ಆಗಿರುವುದು ಕಂಡುಬರುತ್ತದೆ.

ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳು ಇದರಿಂದ ಹೊರತೇನಲ್ಲ. ಹಳೆ ಮೈಸೂರು ರಾಜ್ಯವು ಕಲೆ ಮತ್ತು ಸಂಸ್ಕೃತಿಗೆ ಹೆಚ್ಚು ಆದ್ಯತೆ ನೀಡಿದೆ. ಈ ಹಿಂದೆ ಇದ್ದ ಆಡಳಿತ ಅಧಿಕಾರಿಗಳು ಮತ್ತು ಅಲ್ಲಿ ಸಾಂಸ್ಕೃತಿಕ ಪರಿಸರವೇ ಕಾರಣ. ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳು ಕೆಲವು ಮೈಸೂರು ಶೈಲಿಯ ಪ್ರಭಾವ ಹೊಂದಿದ್ದರೂ ಮೂಲತಹ ವಿಜಯನಗರದ ಚಿತ್ರಶೈಲಿಯ ಪ್ರಭಾವ ಗಾಢವಾಗಿ ಎದ್ದುಕಾಣುತ್ತದೆ. ಅಲ್ಲಲ್ಲಿ ಜಾನಪದೀಯ ಭಿತ್ತಿಚಿತ್ರಗಳು ಕಂಡು ಬಂದಿದ್ದು ಇವುಗಳು ಸುತ್ತಮುತ್ತಲಿನ ಗ್ರಾಮೀಣ ಭಿತ್ತಿ ಚಿತ್ರಿಗಳ ಪ್ರಭಾವವಾಗಿದೆ.

ಸೀಬಿ ಭಿತ್ತಿ ಚಿತ್ರಗಳ ಮೇಲೆ ವಿಜಯನಗರ ಶೈಲಿಯು ಪ್ರಭಾವ ಬೀರಿದೆ. ಚಿತ್ರಗಳಲ್ಲಿ ಕೆಲವು ಪ್ರಾದೇಶಿಕ ಬದಲಾವಣೆಗಳೂ ಹಾಗೂ ಕಲಾವಿದರ ಕೈ ಚಳಕವನ್ನು ಪ್ರದರ್ಶಿಸುವ ಸಲುವಾಗಿ ಕೆಲವು ಬದಲಾವಣೆಗಳು ಆಗಿವೆಯಾದರೂ ಬಹುತೇಕ ವಿಜಯಗರ ಶೈಲಿಯ ಪ್ರಭಾವ ಕಂಡುಬರುವುದು. ಅಲ್ಲಲ್ಲಿ ಹಿನ್ನಲೆ, ಮುನ್ನೆಲೆ, ಬಣ್ಣ ವಸ್ತ್ರಾಲಂಕಾರ, ರೇಖೆ, ಸಂಯೋಜನೆ, ಕ್ಷೇತ್ರ ವಿಂಗಡಣೆ ಚಿತ್ರಗಳ ಸಂಕ್ಷಿಪ್ತ ವಿವರಣೆ ಮುಂತಾದ ಹತ್ತಾರು ಅಂಶಗಳಲ್ಲಿ ವಿಜಯನಗರದ ಚಿತ್ರಶೈಲಿಯ ಪ್ರಭಾವ ಎದ್ದು ಕಾಣುತ್ತದೆ. ಹಿನ್ನೆಲೆಯ ಪ್ರಭಾವಳಿಯಾಗಿ ಅರಮನೆಯ ನಕ್ಷೆಯ ಅಲಂಕಾರವನ್ನು ಬಳಸಿಕೊಳ್ಳಲಾಗಿದೆ. ಇದು ಮೈಸೂರು ಅರಮನೆಯ ವಾಸ್ತು ಶೈಲಿಯಾಗಿದ್ದು ತುಮಕೂರು ಜಿಲ್ಲೆಯ ಭಿತ್ತಿಚಿತ್ರಗಳಲ್ಲಿ

ವಿಶೇಷವಾಗಿದೆ. ಅದೇ ರೀತಿ ವಿಜಯನಗರ ಶೈಲಿಯ ಹಿನ್ನೆಲೆಯಾಗಿ ವಿಜಯನಗರದ ವಾಸ್ತು ವಿನ್ಯಾಸವನ್ನು ಬಳಸಲಾಗಿದೆ. ಇದೂ ಕೂಡ ಹಿನ್ನೆಲೆಗೆ ಪ್ರಭಾವವೆ ಸರಿ. ತುಮಕೂರಿನ ನಲ್ಲಪ್ಪನವರ ಮನೆ ಚಿತ್ರಗಳೂ ಕೂಡ ಇದೇ ಮಾದರಿಯ ಚಿತ್ರಗಳಾಗಿದ್ದು ಭಾವಚಿತ್ರಗಳಲ್ಲಿ ಅಲ್ಲಲ್ಲಿ ಟಿಪ್ಪುವಿನ ಮುಖ ಹಾಗೂ ವಸ್ತ್ರವಿನ್ಯಾಸಗಳನ್ನು ಬಳಸಲಾಗಿದೆ. ಈ ಸಂಯೋಜನೆಯು ಸೀಬಿ ಭಿತ್ತಿ ಚಿತ್ರಗಳಲ್ಲಿ ಕಾಣುತ್ತೇವೆ. ಸೀಬಿ ಚಿತ್ರ ಶೈಲಿ ಪಕ್ಕದ ಹಿರಿಯೂರು ಚಿತ್ರ ಶೈಲಿಯ ಒಂದೇ ಇರುವಂತೆ ಕಾಣುತ್ತೇವೆ. ಅಂದರೆ ಹಂಪಿಯ ಭಿತ್ತಿ ಚಿತ್ರಗಳು ಸೀಬಿ ಹಾಗೂ ಹಿರಿಯೂರಿನ ಶೈಲಿಯು ಒಂದೇ ರೂಪದಲ್ಲಿದ್ದು ಸ್ವಲ್ಪ ಪ್ರಾದೇಶಿಕ ಬದಲಾವಣೆಗೆ ಒಡ್ಡಿಕೊಂಡಿವೆ.

ಕೆರೆಗೋಡಿ ಭಿತ್ತಿ ಚಿತ್ರಗಳ ಸಂಯೋಜನೆಯು ಮೂರು ಅಂಕಣದಲ್ಲಿದ್ದು ಮೊದಲ ಅಂಕಣದಲ್ಲಿ ಚಿತ್ರಿತವಾದ ತ್ರಿಪುರ ಸಂಹಾರವು ಸಂಯೋಜನೆಯಲ್ಲಿ ಭಿನ್ನತೆ ಕಂಡರೂ ವಸ್ತು ವಿಷಯವು ವಿಜಯನಗರದ ಮಾದರಿಯಲ್ಲಿದೆ. ಚಿತ್ರಗಳ ಆಕಾರ, ಹಿನ್ನಲೆ, ಮುನ್ನಲೆಗಳು, ಬಣ್ಣಗಾರಿಕೆ ರೇಖೆ ಸಂಯೋಜನೆ ಮೈಸೂರು ಸಾಂಪ್ರದಾಯಿಕ ಶೈಲಿಯ ಪ್ರಭಾವ ಕಂಡುಬರುತ್ತದೆ. ಉಳಿದಂತೆ ಎರಡು ಅಂಕಣದಲ್ಲಿ ಜಾನಪದ ಚಿತ್ರಗಳು ಸ್ಥಳೀಯ ಕಲಾವಿದರು ಹಿಂದೆ ಅದೇ ಸ್ಥಳದಲ್ಲಿ ಭಿತ್ತಿಚಿತ್ರಗಳು ಇದ್ದುದ್ದನ್ನು ನೋಡಬಹುದು ಅಥವಾ ರಂಗಾಪುರ ಹತ್ತಿರದ ಗುಬ್ಬಿ, ತುಳಸೀಕಟ್ಟೆ ಮುಂತಾದ ಚಿತ್ರರಚನೆಯ ಪ್ರಭಾವ ಅಲ್ಲಿನ ಜಾನಪದ ಭಿತ್ತಿ ಚಿತ್ರಗಳ ಮೇಲೆ ಪ್ರಭಾವ ಬೀರಿದೆ. ಅಲ್ಲದೆ ಜಾನಪದ ಶೈಲಿಯು ವಂಶಪಾರಂಪರ್ಯವಾಗಿ ತಂದೆಯಿಂದ ಮಕ್ಕಳಿಗೆ ಸಹಜವಾಗಿ ಬರುವುದರಿಂದ ಜಾನಪದ ಶೈಲಿಯು ಪ್ರಭಾವ ಇಲ್ಲಿ ಎದ್ದು ಕಾಣುತ್ತದೆ. ರಂಗಾಪುರ ದೇವಾಲಯದ ಭಿತ್ತಿಚಿತ್ರಗಳು ಮೈಸೂರು ಸಾಂಪ್ರದಾಯಿಕ ಶೈಲಿಯಲ್ಲಿದ್ದರೂ ಚಿಕಣಿ ಚಿತ್ರದ ಪ್ರಭಾವ ಮತ್ತು ಸುರಪುರ ಶೈಲಿಯ ಕೆಲವು ತುಣಕುಗಳು ಕಂಡುಬರುತ್ತವೆ. ಸುರಪುರ ಶೈಲಿಯು ಚಿಕಣಿ ಚಿತ್ರದ ಪ್ರಭಾವವನ್ನು ದಶಾವತಾರದ ಹೂಬಳ್ಳಿ ನಕ್ಷಾಲಂಕಾರದಲ್ಲಿ ಕಾಣುತ್ತೇವೆ. ಹಾಗೂ ಶ್ರೀರಾಮ ಪಟ್ಟಾಭಿಷೇಕ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರ ಚಿತ್ರದಲ್ಲಿ ಅಲಂಕಾರ ತೂಗು ದೀಪಗಳನ್ನು ಚಿತ್ರಸಲಾಗಿದೆ. ಈ ತೂಗುದೀಪಗಳು ಸುರಪುರ ಚಿತ್ರಕಲೆಯ ವಿಶೇಷತೆಯಲ್ಲಿ ಒಂದಾಗಿದೆ. ಇಂತಹ ಅಲಂಕಾರಿಕ ತೂಗುದೀಪವನ್ನು ಬಳಸಿರುವುದರಿಂದ ರಂಗಾಪುರದ ಚಿತ್ರ ರಚನೆಗೆ ಸುರಪುರ ಶೈಲಿಯು ಪೂರಕವಾದ ಪ್ರಭಾವ ಬೀರಿದೆ ಎನ್ನುವುದು ಕಂಡುಬರುತ್ತದೆ. ವಸ್ತುವಿನ್ಯಾಸ ಹಾಗೂ ನಿಲುವಿನ ಭಂಗಿಯು ವಿಜಯನಗರದ ಶೈಲಿಯ ಪ್ರಭಾವದಿಂದ ಮೂಡಿಬಂದಿವೆ.

ಬೆನಕನ ಕೆರೆಯ ಭಿತ್ತಿ ಚಿತ್ರಗಳು ಜಾನಪದ ಶೈಲಿಗೆ ನಿದರ್ಶನವಾಗಿದ್ದು ಭಿತ್ತಿ ಚಿತ್ರಗಳನ್ನು ರಚನೆ ಮಾಡಿದ ಕಲಾವಿದನು ಮೈಸೂರು ಅರಸರ ಕೃಪೆಗೆ ಪಾತ್ರರಾಗಿ ಮೆಚ್ಚುಗೆ ಪಡೆದಿದ್ದನೆಂದು ಇಲ್ಲಿಯ ಒಂದು ಚಿತ್ರವು ಸಾಬೀತುಪಡಿಸುತ್ತದೆ. ಹಾಗೂ ಚಿತ್ರಗಳು ಜನಪದ ಶೈಲಿಯಲ್ಲಿದ್ದರೂ ಕಲಾವಿದ ಮೈಸೂರು ಶೈಲಿಯ ಪ್ರಭಾವಕ್ಕೆ ಒಳಗಾಗಿದ್ದಾನೆ. ಅಮೃತೂರಿನ ಭಿತ್ತಿ ಚಿತ್ರಗಳ ತಿದ್ದು ಪಡಿಕಾರ್ಯದಿಂದ

ಚಿತ್ರಗಳು ಮೂಲ ಕಲಾಕೃತಿಗಳಿಂದ ದೂರ ಉಳಿದಿವೆ. ಆದುದರಿಂದ ಇವುಗಳ ನಿಖರವಾದ ನಿಲುವು ದೊರಕುತ್ತಿಲ್ಲ. ಆದರೆ ಸುತ್ತಮುತ್ತಲೂ ಮೈಸೂರು ಶೈಲಿಯ ಭಿತ್ತಿ ಚಿತ್ರಗಳು ಇದ್ದುದರಿಂದ ಇಲ್ಲಿಯೂ ಸಹ ಮೈಸೂರು ಶೈಲಿಯ ಭಿತ್ತಿ ಚಿತ್ರಗಳು ಪ್ರಭಾವ ಇದೆ ಎನ್ನುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಈ ಹಿಂದೆ ತಿಳಿಸಿರುವ ಹಾಗೆ ಸಿರಾ ಭಿತ್ತಿ ಚಿತ್ರಗಳು, ಸಿಬಿ ಭಿತ್ತಿ ಚಿತ್ರಗಳು, ತುಮಕೂರು ನಲ್ಲಿಪ್ಪನ ಮನೆಯ ಭಿತ್ತಿ ಚಿತ್ರಗಳು ಹಾಗೂ ಪಕ್ಕದ ತಾಲ್ಲೂಕಿನ ಹಿರಿಯೂರಿನ ತೇರುಮಲ್ಲೇಶ್ವರ ದೇವಾಲಯದಲ್ಲಿರುವ ಭಿತ್ತಿ ಚಿತ್ರಗಳು ಸಾಮ್ಯತೆಯಲ್ಲಿ ಹತ್ತಿರವಾದ ಹೋಲಿಕೆಯನ್ನು ವ್ಯಕ್ತಪಡಿಸುತ್ತವೆ. ಆದರೆ ಸಿರಾದ ಭಿತ್ತಿ ಚಿತ್ರಗಳು ಮೈಸೂರು ಅರಸರ ಪ್ರಭಾವದಿಂದ ರಚನೆಗೊಂಡಿವೆ. ಅಲ್ಲಿನ ಚಿತ್ರರಚನೆಯ ಪ್ರತ್ಯೇಕ ಅಂಕಣಗಳ ವಿಂಗಡಣೆಯಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಕೆರೆಗೋಡಿ ರಂಗಾಪುರ ಸಿಬಿ ಚಿತ್ರಗಳಿಗಿಂತ ವಿಶಾಲವಾದ ಅಂಕಣದಲ್ಲಿ ಚಿತ್ರ ರಚಿಸಿರುವುದು ಹಾಗೂ ಹಿನ್ನೆಲೆಯಲ್ಲಿ ಮೈಸೂರು ಅರಮನೆಯ ವಾಸ್ತು ವಿನ್ಯಾಸವೇ ಚಕ್ರದ ಹಿನ್ನೆಲೆ ಮತ್ತು ಮೈಸೂರು ಒಡೆಯರ ದರ್ಬಾರಿನ ಚಿತ್ರವು ಹಾಗೂ ಅಲ್ಲಲ್ಲಿ ಅಲಂಕಾರಿಕ ಕುದುರೆಗಳು, ಕುದುರೆ ಏರಿದ ಒಡೆಯರು, ಚಾಮರ ಇವೆಲ್ಲವೂ ಮೈಸೂರು ಒಡೆಯರ ಹಾಗೂ ಆಡಳಿತ ವೈಖರಿಯ ಪ್ರಭಾವ ಈ ಚಿತ್ರದ ಮೇಲಾಗಿದೆ ಎನ್ನುವುದರಲ್ಲಿ ಸಂಶಯವಿಲ್ಲ.

ಈ ಮೇಲಿನ ಎಲ್ಲಾ ಚಿತ್ರಗಳು ಆಯಾ ಪ್ರದೇಶದ ಪ್ರಾದೇಶಿಕ ಬದಲಾವಣೆಗಳಿಂದ ಕೂಡಿದೆ. ಈ ಚಿತ್ರಗಳು ಒಂದು ಕಡೆಯ ಚಿತ್ರದಿಂದ ಮತ್ತೊಂದು ಕಡೆಯ ಚಿತ್ರಗಳಿಗೆ ಭಿನ್ನತೆಯಿಂದ ಕೂಡಿದ್ದು ಪ್ರಾದೇಶಿಕ ಹಾಗೂ ನೆರೆಹೊರೆ ಭಿತ್ತಿಚಿತ್ರಗಳ ಮಿಶ್ರಪ್ರಭಾವ ವ್ಯಕ್ತವಾಗುತ್ತದೆ.

### ಪ್ರೇರಣೆ

ತುಮಕೂರು ಭಿತ್ತಿ ಚಿತ್ರಗಳ ರಚನೆಗೆ ಮೈಸೂರು ಒಡೆಯರು, ಟಿಪ್ಪುಸುಲ್ತಾನ್ ಮುಖ್ಯವಾಗಿ ಪ್ರೋತ್ಸಾಹ ನೀಡಿದ್ದು, ಜೊತೆಗೆ ಪೌಜುದಾರರು, ಊರಿನ ಗಣ್ಯರು, ಮಠಾಧೀಶರು, ಸ್ಥಳೀಯ ನಾಗರೀಕರು ಸೇರಿದಂತ ಹಲವಾರು ಮೂಲಗಳಿಂದ ಭಿತ್ತಿ ಚಿತ್ರ ರಚನೆಗೆ ಉತ್ಸಾಹ ತುಂಬಿ ಆರ್ಥಿಕ ನೆರವು ನೀಡಿರುವುದು ಕಂಡು ಬರುತ್ತದೆ. ಭಿತ್ತಿ ಚಿತ್ರಕ್ಕಷ್ಟೇ ಅಲ್ಲದೆ ವಾಸ್ತು ಶಿಲ್ಪ ಕಲೆಗಳಿಗೂ ಇದೇ ರೀತಿಯ ಪ್ರೋತ್ಸಾಹ ದೊರಕಿರುವುದು ಹಲವಾರು ಶಾಸನಗಳಿಂದ ತಿಳಿಯುತ್ತದೆ. ವಿಜಯನಗರದ ಅರಸರ ಕಾಲವನ್ನು ಅಂದರೆ ೧೫೦೦ ಕಾಲ ಭಾರತೀಯ ಚಿತ್ರಕಲಾ ಇತಿಹಾಸದ ಪುನರುತ್ಥಾನದ ಸಮಯವೆಂದೂ ಕಲಾ ಇತಿಹಾಸತಜ್ಞರ ಅಭಿಪ್ರಾಯವಾಗಿದೆ. ಈ ಕಲಾ ಪರಂಪರೆಯು ದಕ್ಷಿಣಭಾರತದಲ್ಲಿ ಇಪ್ಪತ್ತನೇ ಶತಮಾನದ ಅಂತ್ಯದವರೆಗೂ ವಿರಾಜಮಾನರಾಗಿ ಚಿತ್ರಕಲೆಯ ಕೀರ್ತಿಯಿಂದ ಮೆರೆದಿದೆ ಎನ್ನುವುದಕ್ಕೆ ಮೈಸೂರು ಅರಮನೆ, ಹಂಪಿ, ಆನೆಗುಂದಿ, ಲೇಪಾಕ್ಷಿ, ವಾಡೆ ಭಿತ್ತಿಚಿತ್ರಗಳು, ಮನೆಗಳಲ್ಲಿ, ಮಠಗಳಲ್ಲಿ ರಚನೆಗೊಂಡಿರುವ ಭಿತ್ತಿ ಚಿತ್ರ ಹಾಗೂ ಚಿತ್ರಗಳು ಕಲಾಪರಂಪರೆಯಿಂದ ತಿಳಿದು ಬರುತ್ತದೆ.

ರಾಜ ಮನೆತನಗಳು ಕಲಾವಿದರಿಗೆ ಆರ್ಥಿಕ ನೆರವು ಮತ್ತು ಆಶ್ರಯ ನೀಡುವುದರ ಮೂಲಕ ಉತ್ತಮ ಕಲಾಪರಂಪರೆಯ ಬೆಳವಣಿಗೆಗೆ ಕಾರಣವಾಗಿವೆ. ಜಿಲ್ಲೆಯಲ್ಲಿನ ಕೆರೆಗೋಡಿಯ ಭಿತ್ತಿ ಚಿತ್ರದಲ್ಲಿ

ಕಲಾವಿದನ ಹೆಸರು ಹಾಗೂ ಚಿತ್ರಕಾರ್ಯಕ್ಕೆ ನೀಡಿದ ಸಂಭಾವನೆ ೭ಂರೂ ಮಜೂರಿ ಎಂದು ಬರೆಸಿರುವುದು, ಸುರಪುರದ ಗರುಡಾದ್ರಿ ಮನೆತನಕ್ಕೆ ಭಿತ್ತನೆಗೆ ಅನುಕೂಲವಾಗುವ ಜಮೀನನ್ನು ಬಳುವಳಿಯಾಗಿ ನೀಡಿರುವುದು ಹಾಗೂ ಮೈಸೂರು ಅರಮನೆಯ ಕಲಾವಿದರಿಗೆ ನೀಡುತ್ತಿದ್ದ ಸಂಭಾವನೆ ಕುರಿತಾದಾದ ದಾಖಲೆಗಳು ಇಂದಿಗೂ ನಮ್ಮ ಕಣ್ಮುಂದೆ ಸಾಕ್ಷಿಯಾಗಿ ನಿಲ್ಲುತ್ತವೆ. ರಾಜ ರವಿವರ್ಮನ ಕಲೆಯನ್ನು ಮೆಚ್ಚಿ ಹೆಚ್ಚಿನ ಸಂಭಾವನೆಯನ್ನು ನೀಡಿ ಮೂರನ್ನಾಲ್ಕು ಭಾರಿ ಮೈಸೂರು ಅರಮನೆಯ ಚಿತ್ರ ರಚನೆ ಕಾರ್ಯಕ್ಕೆ ಕರೆಸಿದ್ದರು ಎಂಬುದು ದಾಖಲೆಗಳ ಮೂಲಕ ಖಚಿತವಾಗುತ್ತದೆ. ಹೀಗೆ ಕಲಾವಿದರಿಗೆ ಪ್ರೋತ್ಸಾಹ ನೆರವು ನೀಡುವುದರ ಮೂಲಕ ಕಲಾವಿದರ ಆರ್ಥಿಕ ಬವಣೆ ನೀಗಿಸುವದರ ಮೂಲಕ ನಾಗರೀಕ ಸಮಾಜಕ್ಕೆ ಉತ್ತಮ ಉದಾಹರಣೆಯಾಗಿರುವುದು. ನಾಗರೀಕರು, ಶ್ರೀಮಂತರು ಹಾಗೂ ಜನಸಾಮನ್ಯರೂ ಕೂಡ ಚಿತ್ರ ಬರೆಸುವ ಹಾಗೂ ಮನೆಗೊಂದು ಚಿತ್ರ ಎಂಬಂತೆ ಪ್ರೇರೇಪಿಸಿದರು. ಈ ಬೆಳವಣಿಗೆಯು ಉತ್ತಮ ಕಲಾ ಶೈಲಿ ಪರಂಪರೆ ಹಾಗೂ ಅಭಿವೃದ್ಧಿಗೆ ಪ್ರೋತ್ಸಾಹ ನೀಡಿದೆ.

**ತಂತ್ರಗಾರಿಕೆ**

ಕಲಾವಿದನು ತಮ್ಮ ಕಾರ್ಯ ವೈಖರಿಯಲ್ಲಿ ಹಲವಾರು ತಂತ್ರಗಳಿಂದ ಕೂಡಿದ ಕಲಾಕೃತಿ ಭಿತ್ತಿಚಿತ್ರ ರಚನೆಯಲ್ಲಿ ತೊಡಗಿಸಿಕೊಂಡಿರುತ್ತಾನೆ. ಕಲಾಕೃತಿಯ ರಚನೆಯ ಸಂದರ್ಭದಲ್ಲಿ ಪ್ರಾರಂಭದಿಂದ ಕೊನೆಯವರೆಗೆ ಅಂದರೆ ಭಿತ್ತಿ ರಚನೆ ಮಾಡಿಕೊಳ್ಳುವುದು ಪ್ರಾರಂಭವಾದರೆ ಮುಕ್ತಾಯದ ಗೆರೆಗಳನ್ನು ಹಾಗೂ ಸಂರಕ್ಷಣೆಯ ಕಾರ್ಯದವರೆವಿಗೂ ಜಾಣ್ಮೆಯಿಂದ ಕಾರ್ಯನಿರ್ವಹಿಸುತ್ತಾರೆ. ಕಲಾಕೃತಿಯ ಸಂಯೋಜನೆ ರೇಖೆ, ಬಣ್ಣ, ಕುಂಚ, ಭಿತ್ತಿ ಇವು ಹಲವಾರು ವಿನೂತನ ವಿಧಾನದಿಂದ ಕೂಡಿರುತ್ತದೆ. ಭಿತ್ತಿ ಚಿತ್ರ ರಚನೆಯ ಪ್ರತಿಯೊಂದು ಹಂತದಲ್ಲೂ ವಿಭಿನ್ನ ಮಾದರಿಯ ರಚನೆಯಿಂದ ಕೂಡಿರುತ್ತದೆ. ಕಲಾವಿದನು ಭಿತ್ತಿಯ ರಚನೆಯನ್ನು ಸಾಂಪ್ರದಾಯಿಕವಾಗಿ ರಚನೆ ಮಾಡಿಕೊಂಡು ಬಂದಿರುವುದು ಇಂದಿನವರೆಗೂ ಭಿತ್ತಿ ಚಿತ್ರಗಳ ಇರುವಿಕೆಗೆ ಸಹಕಾರಿಯಾಗಿದೆ.

ಭಾರತದ ಚಿತ್ರಗಳು ಸಂಕೇತ ಪ್ರಧಾನವಾದ ಹಾಗೂ ಬಣ್ಣಗಳಿಂದ ರಚಿಸಿದ ಧಾರ್ಮಿಕ ತತ್ವಗಳು,[೧] ಶಿವ, ಕೃಷ್ಣ, ರಾಮ, ರಾವಣ, ಕುಂಬಕರ್ಣ ಮುಂತಾದ ದೇವತೆಗಳ ಚಿತ್ರಗಳನ್ನು ಕೃಷ್ಣನಿಗೆ ನೀಲಿ, ಶಿವನಿಗೆ ಬೂದು ಹಾಗೂ ದೇವತೆಗಳ ಆಯುಧಗಳು ಸಂಕೇತಗಳಾಗಿವೆ. ಶಂಕ, ಚಕ್ರ, ತ್ರಿಶೂಲ, ಢಮರುಗ ಮುಂತಾದವುಗಳು ಹಾಗೂ ದೇವತೆಗಳ ವಾಹನದಲ್ಲಿಯೂ ನಂದಿ, ನವಿಲು, ಗರುಡ ಹೀಗೆ ರಥ, ರಥದ ಸವಾರಿಗಳು, ಗಿಳಿ, ಕೋಣ, ಮುಂತಾದವು ಧ್ವಜ, ಆಂಜನೇಯ, ಗರುಡ ಹೀಗೆ ಹಲವಾರು ಸಂಕೇತಗಳನ್ನು ಆಯಾ ದೇವತೆಗಳ ಜೊತೆಯಲ್ಲಿ ಚಿತ್ರಿಸುವುದು ಕಲಾವಿದ ತಂತ್ರವಾಗಿ ಆ ಚಿತ್ರಗಳಿಗೆ ಕೆಂಪು, ಹಳದಿ, ಕಪ್ಪು, ನೀಲಿ, ಬಣ್ಣಗಳನ್ನು ಹಿನ್ನೆಲೆ ಮುನ್ನೆಲೆಯಾಗಿ ಬಳಸುವುದು ಸಂದರ್ಭಚಿತವಾಗಿ ಬಳಸುವುದು ಉಂಟು. ಕುಂಚ ತಯಾರಿಕೆಯಲ್ಲಿ ಹಲವಾರು ವಿಧಾನಗಳನ್ನು ಬಳಸುವುದು ಕಾಲಾನುಕ್ರಮೇಣ ಅವುಗಳ ಬದಲಾವಣೆಗೆ ಹಾಗೂ ವಿಧವಿಧವಾದ ಕುಂಚಗಳ ತಯಾರಿಕೆಯು ಕಲಾವಿದನ ತಂತ್ರವಾಗಿದೆ.

ವಿಷ್ಣುಧರ್ಮೋತ್ತರ ಪುರಾಣ, ಮಾನಸೋಲ್ಲಾಸ, ಶಿವತತ್ವ ರತ್ನಾಕರ, ಶ್ರೀತತ್ವನಿಧಿ ಮುಂತಾದ ಗ್ರಂಥಗಳಲ್ಲಿ ಭಿತ್ತಿಯ ರಚನಾ ವಿಧಾನವನ್ನು ಸವಿಸ್ತಾರವಾಗಿ ವಿವರಿಸಿದ್ದಾರೆ. ವಿಷ್ಣು ಧರ್ಮೋತ್ತರ ಪುರಾಣವು ಸುಮಾರು ೫ನೇ ಶತಮಾನದ್ದು ಎಂದು ಗುರುತಿಸಲಾಗಿದೆ. ಈ ಗ್ರಂಥದಲ್ಲಿ ಭಿತ್ತಿರಚನಾ ವಿಧಿವಿಧಾನದ ಬಗ್ಗೆ ತಿಳಿಸಿದ್ದಾರೆ. ಇದರಲ್ಲಿ ಮೂರು ಖಂಡಗಳಿವೆ. ಮೂರನೇಯ ಖಂಡದ ಮೂವತ್ತೈದನೇಯ ಅಧ್ಯಾಯದಲ್ಲಿ 'ಚಿತ್ರಸೂತ್ರಂ' ಎಂಬ ಪ್ರಕರಣವಿದೆ. ಈ ಅಧ್ಯಾಯದಿಂದ ಚಿತ್ರ ಕಲೆಯ ಬಗ್ಗೆ ಮಹತ್ವಪೂರ್ಣವಾದ ಮಾಹಿತಿ ದೊರೆಯುತ್ತದೆ.[೨]

ಪುರಾಣ ಗ್ರಂಥಗಳು ಭಿತ್ತಿ ರಚನೆಯ ತಂತ್ರಗಾರಿಕೆಯ ಬಗ್ಗೆ ಹಾಗೂ ಶಿಲ್ಪ, ವಾಸ್ತು ಶಿಲ್ಪ ಹಾಗೂ ಚಿತ್ರಗಳ ಬಗ್ಗೆ ಅಳತೆ, ಪ್ರಮಾಣ, ಬಣ್ಣಗಳ ತಯಾರಿಕೆ, ಕುಂಚಗಳ ತಯಾರಿಕೆ, ಶಿಲ್ಪಶಾಸ್ತ್ರದ ಬಗ್ಗೆಯೂ ತಿಳಿಸಿವೆ. ಇದೇ ಮಾದರಿಯಲ್ಲಿ ಭಿತ್ತಿ ಚಿತ್ರಗಳು ರಚನೆಗೊಂಡಿರುವುದು ಕಂಡುಬರುತ್ತದೆ. ಚಿತ್ರರಚನೆಯ ಮುನ್ನ ಭಿತ್ತಿ ರಚನಾ ಶಾಸ್ತ್ರದ ಪ್ರಕಾರ ಸುಣ್ಣ, ಬೆಲ್ಲ, ಮರಳು, ಅಂಟುದ್ರಾವಣ, ನಾರು ಮುಂತಾದ ಮಿಶ್ರಣದೊಂದಿಗೆ ಗಾರೆ ತಯಾರಿಸಿ ನಂತರ ಚಿತ್ರ ರಚನೆ ಮಾಡುತ್ತಿದ್ದರು. ಜೊತೆಯಲ್ಲಿ ಮಣ್ಣು ಮತ್ತು ಮರಳುಗಳೊಂದಿಗೆ ಸಸ್ಯ ಸಂಬಂಧಿಯಾದ ವಸ್ತುಗಳನ್ನು (Organic fibrous material) ಗೋಡೆಗೆ ಹತ್ತಿಸಿ ಅದರ ಮೇಲೆ ಸುಣ್ಣದ ಪದರ ಹಚ್ಚಿ ನಂತರ ಚಿತ್ರರಚನೆಗೆ ತೊಡಗುತ್ತಿದ್ದರು. ಆದರೆ ಏಳನೇಯ ಶತಮಾನದ ಶಾಸ್ತ್ರ ಗ್ರಂಥಗಳ ರಚನೆಯಾಗಿದ್ದು ಅದರಲ್ಲಿ ಭಿತ್ತಿ ಸಿದ್ಧತೆಯ ಬಗ್ಗೆ ಸಾಕಷ್ಟು ಸಂಗತಿಗಳು ತಿಳಿದುಬರುತ್ತದೆ.[೩] ಹೀಗೆ ಪೂರ್ವ ಸಿದ್ಧತೆಯಲ್ಲಿ ಚಿತ್ರದ ಗುಣಮಟ್ಟ ಸಂಯೋಜನೆ ಹಾಗೂ ಬಣ್ಣಗಳ ಸಂಯೋಜನೆಯನ್ನು ಮೊದಲೇ ಪೂರ್ವ ಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಈ ರೀತಿಯ ಭಿತ್ತಿ ಚಿತ್ರ ರಚನೆಯ ಹಾಗೂ ಭಿತ್ತಿಯ ತಂತ್ರಗಾರಿಕೆಯನ್ನು ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳಲ್ಲಿ ಕಂಡುಬರುತ್ತದೆ.

ಸೀಬಿ, ಸಿರಾದ ಭಿತ್ತಿ ಚಿತ್ರಗಳಲ್ಲಿ ಹಿನ್ನೆಲೆಯಾಗಿ ಒಂದೇ ಮಾದರಿಯ ಬಣ್ಣವನ್ನು ಸಂಯೋಜಿಸಿದ್ದಾರೆ. ಹಿನ್ನೆಲೆಗೆ ಕೆಂಪುವರ್ಣವನ್ನು, ಸಂಭಂದಿಸಿದ ದೇವತೆಗಳಿಗೆ ಆಯಾ ಬಣ್ಣವನ್ನು, ಬಾಹ್ಯ ರೇಖೆಯಾಗಿ ಕಪ್ಪು ಬಣ್ಣವನ್ನು ಬಳಸಿದ್ದಾನೆ. ಸೀಬಿ ಭಿತ್ತಿ ಚಿತ್ರದಲ್ಲಿ ಮುಖ್ಯವಾದ ಅಂಕಣವನ್ನು ಭಾಗವತಪುರಾಣ, ವಿಷ್ಣುವಿನ ವಿಶ್ವರೂಪ, ಕೃಷ್ಣಲೀಲೆಗಳ ನೂರಾರು ಚಿತ್ರಗಳನ್ನು ಚಿಕ್ಕ ಚಿಕ್ಕ ಅಂಕಣವನ್ನಾಗಿಸಿ ಪುರಾಣದ ಸಂದರ್ಭವನ್ನು ಒಂದೊಂದು ಅಂಕಣದಲ್ಲೂ ಸಂಕ್ಷಿಪ್ತವಾಗಿ ನಿರೂಪಿಸಿರುವುದು ಕಲಾವಿದನ ಕಲೆಯ ತಂತ್ರವಾಗಿದೆ. ಇದೇ ಮಾದರಿಯು ಕೆರೆಗೋಡಿ ರಂಗಾಪುರದ ಭಿತ್ತಿ ಚಿತ್ರಗಳಲ್ಲಿಯೂ ಕಾಣುತ್ತೇವೆ. ದೇವತೆಗಳ ತಾಳಮಾನವನ್ನು ಅವುಗಳ ಅಳತೆಯಲ್ಲಿ ತೋರಿಸುವುದರ ಮೂಲಕ ಮುಖ್ಯ ದೇವತೆಯ ಪ್ರಧಾನ ಪಾತ್ರವನ್ನು ಸೂಚಿಸುತ್ತದೆ. ಉಳಿದಂತೆ ಅದಕ್ಕಿಂತ ಚಿಕ್ಕದಾಗಿ ರಚಿಸುವುದು ಕಲಾವಿದರ ಜಾಣ್ಮೆಯಾಗಿದೆ. ಅಜಂತ ಭಿತ್ತಿ ಚಿತ್ರಗಳಲ್ಲಿ ಬುದ್ಧ ಮತ್ತು ಯಶೋಧರೆಯ ಚಿತ್ರವನ್ನು ಬುದ್ಧನ ಚಿತ್ರವು ದೊಡ್ಡದಾಗಿಯೂ ಯಶೋಧರೆಯ ಚಿತ್ರವು ಚಿಕ್ಕದಾಗಿಯೂ ಅವನ ಮಗ ರಾಹುಲನ ಚಿತ್ರವು ಅತಿ ಚಿಕ್ಕದಾಗಿಯೂ ಚಿತ್ರಿಸಲಾಗಿದೆ. ಹಿನ್ನೆಲೆಯಾಗಿ ಚಿಕ್ಕ ಗಾತ್ರದ ಬುದ್ಧನ ಅನುಯಾಯಿಗಳನ್ನು

ತೋರಿಸಲಾಗಿದೆ. ಉಗ್ರನರಸಿಂಹ, ಈಶ್ವರ ಪಾರ್ವತಿ, ವಿಷ್ಣು-ಸರಸ್ವತಿ, ಬ್ರಹ್ಮ-ಲಕ್ಷ್ಮಿ ಇವರುಗಳ ಚಿತ್ರ ಬರೆಯಬೇಕಾದರೆ ಗಂಡು ದೇವತೆಯ ಚಿತ್ರಗಳನ್ನು ಎತ್ತರ ಮತ್ತು ದೊಡ್ಡದಾಗಿಯೂ, ಹೆಣ್ಣು ದೇವತೆಗಳ ಚಿತ್ರಗಳು ಚಿಕ್ಕದಾಗಿಯೂ ತಮ್ಮ ತಮ್ಮ ತೊಡೆಯ ಮೇಲೆ ಕುಳ್ಳಿರಿಸಿಕೊಂಡಿರುವಂತೆ ಚಿತ್ರಿಸುವುದರ ಮೂಲಕ ಪ್ರಭಲತೆಯನ್ನು ಗಾತ್ರದ ಮಾನದಂಡದ ಮೇಲೆ ನಿರೂಪಿಸಿದ್ದಾರೆ.

ಭಿತ್ತಿಯ ತಯಾರಿಕೆಯಲ್ಲಿ ಎರಡು ವಿಧಾನವಿದೆ ೧. ಹಸಿಗಾರೆಭಿತ್ತಿ ೨. ಒಣಗಿದ ಗಾರೆಭಿತ್ತಿ ಹಸಿಗಾರೆ ಭಿತ್ತಿಯು ಪಾಶ್ಚಿಮಾತ್ಯರಲ್ಲಿ ಹೆಚ್ಚಾಗಿ ಕಂಡು ಬಂದಿದೆ. ಅಜಂತೆಯ ಭಿತ್ತಿ ಚಿತ್ರಗಳು ಒಣಗಿದ ಗಾರೆಯ ಭಿತ್ತಿಯ ಮೇಲೆ ರಚನೆಗೊಂಡಿವೆ ಇದೇ ಮಾದರಿಯು ಭಾರತಾದ್ಯಂತ ಇರುವ ಭಿತ್ತಿ ಚಿತ್ರಗಳಲ್ಲಿ ಕಾಣುತ್ತೇವೆ. ಹಸಿಭಿತ್ತಿಯು ಗೋಡೆ ಹಸಿ ಇದ್ದಾಗಲೇ ಅದರ ಮೇಲೆ ಚಿತ್ರರಚನೆ ಮಾಡುವುದು ಈ ಮೊದಲು ಕರ್ನಾಟಕದ ಕರಾವಳಿ ಕವಿ ಚಿತ್ರಕಲೆಯಲ್ಲಿ ಚಾಲ್ತಿಯಲ್ಲಿತ್ತು. ಒಣಗಿದ ಗಾರೆ ವಿಧಾನವು ಗಾರೆಯು ಒಣಗಿದ ನಂತರ ಪೂರ್ಣವಾಗಿ ಕೀಸೆಚ್ ಮಾಡಿಕೊಂಡು ನಂತರ ಬಣ್ಣದ ಕಾರ್ಯ ಮುಂದುವರೆಯುತ್ತಿತ್ತು. ತುಮಕೂರಿನ ಜಿಲ್ಲೆಯ ಭಿತ್ತಿ ಚಿತ್ರಗಳು ಒಣಗಿದ ಗಾರೆ ಭಿತ್ತಿಯ ಮೇಲೆ ರಚನೆಗೊಂಡಿರುವುದು ತಜ್ಞರು ಸ್ಪಷ್ಟಪಡಿಸಿದ್ದಾರೆ.

ಕುಂಚ ತಯಾರಿಕೆಯು ಒಂದು ವಿಶಿಷ್ಟವಾದ ಕಲೆಯೇ ಆಗಿತ್ತು. ಇಂದು ಆಧುನಿಕ ಬಣ್ಣ ಹಾಗೂ ಕುಂಚಗಳನ್ನು ಬಳಸುತ್ತೇವೆ. ಆದರೆ ಭಿತ್ತಿ ಚಿತ್ರರಚನೆಗೆ ಬೇಕಾಗುವ ಅಳತೆಯ ಕುಂಚಗಳನ್ನು ಸ್ವತಃ ಕಲಾವಿದನೇ ತಯಾರಿಸಿಕೊಳ್ಳುತ್ತಿದ್ದ. ಮೊದಲು ತೆಂಗಿನ ಮೊಟ್ಟೆಯ ತುದಿಯನ್ನು ಚೆನ್ನಾಗಿ ಕುಟ್ಟಿ ಅದರಿಂದ ಬೇಕಾದ ಅಳತೆಯ ಕುಂಚವನ್ನು ಮಾಡಿಕೊಳ್ಳುತ್ತಿದ್ದರು. ಮರದ ಬೇರು, ಒಂದು ಬಗೆಯ ಕುಂಚದ ಅಜಂತೆಯ ಚಿತ್ರ ರಚನೆಯ ಪ್ರಾಣಿಯ ಕೂದಲಿನಿಂದ ಮಾಡಿದ ಕುಂಚವನ್ನು ಬಳಸಿರುವುದು ಅಲ್ಲಿನ ಸೂಕ್ಷ್ಮ ಆಕರ್ಷಣೆ ರೇಖೆಗಳಿಂದ ತಿಳಿದು ಬರುತ್ತದೆ. ಇಲ್ಲಿಯೂ ಸಹಿತ ಪ್ರಾಣಿಯ ಕೂದಲಿನ ಕುಂಚವನ್ನು ಬಳಸಿದ್ದಾರೆ ಎನ್ನವುದು ಸ್ಪಷ್ಟವಾಗುತ್ತಿದೆ.

ಒಂದೊಂದು ನೆಲೆಯಲ್ಲಿಯೂ ವಿಭಿನ್ನವಾದ ಚಿತ್ರರಚನೆಯನ್ನು ಕಾಣುತ್ತೇವೆ. ಸಿರಾದ ರೇವಣ ಸಿದ್ದೇಶ್ವರ ದೇವಾಲಯದ ಭಿತ್ತಿ ಚಿತ್ರವು ಚಿಕ್ಕ ಅಂಕಣಗಳಾಗಿರದೆ ಸುಮಾರು ೨೫ ಅಡಿಯಷ್ಟು ಅಳತೆಯ ಚಿತ್ರಗಳು ಮೂಡಿರುವುದು ಇಲ್ಲಿಯ ವಿಶೇಷವಾಗಿದೆ. ಸಿಬಿ ಕೆರೆಗೋಡು ರಂಗಾಪುರ ಒಂದು ಮಾದರಿಯಲ್ಲಿದ್ದಂತೆ ಅಮೃತೂರು ಹಾಗೂ ಬೆನಕನ ಕೆರೆಯ ಭಿತ್ತಿಯು ಒಂದು ಮಾದರಿಯ ಚಿತ್ರರಚನೆಯಾಗಿದೆ. ಒಂದೊಂದು ಕಡೆ ಒಂದೊಂದು ರೀತಿಯಲ್ಲಿ ಚಿತ್ರ ರಚಿಸುವುದು ಕಲಾವಿದರ ಸ್ಥಳ ಹೊಂದಾಣಿಕೆಯ ವಿಶೇಷ ತಂತ್ರವಾಗಿದೆ.

ಸಿರಾದ ಭಿತ್ತಿಯಲ್ಲಿ ಸುರಪುರ ತೂಗು ದೀಪಗಳನ್ನು ಮೈಸೂರು ಬೀದಿ ದೀಪಗಳಂತೆ ರಚಿಸಿ ಸುರಪುರ ಚಿತ್ರ ಶೈಲಿಯ ಮಾದರಿಯಲ್ಲಿ ಮೂಡಿಸಿರುವುದು ಕಲಾವಿದನ ತಂತ್ರವಾಗಿದೆ. ದೇವತಾ ಕೃತಿಗಳು ಹಾಗೂ ಮಾನವಾ ಕೃತಿಗಳನ್ನು ಚಪ್ಪಟೆಯಾಗಿ ರಚಿಸದೆ ದೊಡ್ಡತನ ಕಾಣುವಂತೆ ಪ್ರಯತ್ನಿಸಿದ್ದಾನೆ. ಮೈಸೂರಿನ ಪರಿಸರವನ್ನು ಚಿತ್ರಗಳಲ್ಲಿ ತೋರಿಸುವ ಪ್ರಯತ್ನ ಮಾಡಿದ್ದಾನೆ. ಶ್ರೀಮಂತಿಕೆಯ ಸಂಕೇತವಾಗಿ

ದೇವ ಮೂರ್ತಿಗಳಿಗೆ ಅತಿಯಾದ ಆಭರಣಗಳನ್ನು ಧರಿಸುವುದರ ಮೂಲಕ ವ್ಯಕ್ತ ಪಡಿಸಲಾಗಿದೆ. ರೇಷ್ಮೆ ಬಟ್ಟೆ, ಚಿನ್ನದ ಹೊದಿಕೆ ಹೊಂದಿರುವ ರಾಜಪೋಷಾಕರುಗಳು ಮೆತ್ತನೆಯ ಹಾಸಿಗೆ ಮುಂತಾದ ವಸ್ತುಗಳನ್ನು ಬಳಸುವುದರ ಮೂಲಕ ರಾಜರ ಅಂತಸ್ಥನ್ನು ಹೆಚ್ಚಿಸುವಲ್ಲಿ ಚಿತ್ರಗಳು ಸಹಕಾರಿಯಾಗಿವೆ. ವಿಶೇಷವಾಗಿ ಮೈಸೂರು ಸಾಂಪ್ರದಾಯಿಕ ಕಲೆಯು ಚಿನ್ನದ ಹಾಳೆಯ ಹೊದಿಕೆಯ (ಜೆಸ್ಸೊಮಾಡಿ ಅದರ ಮೇಲೆ ಚಿನ್ನದಹಾಳೆಯನ್ನು, ಮರವಜ್ರ, ಸರಿಯ ಸಹಾಯದಿಂದ ಅಂಟಿಸುವುದು) ಸೂಕ್ತ ಕುಸುರಿ ಕೆಲಸವನ್ನು ಬಿಡಿ ಚಿತ್ರಗಳಲ್ಲಿ ರಚನೆಗೊಂಡಿರುವುದು ಕಲಾವಿದನ ವಿಶೇಷ ತಂತ್ರಗಾರಿಕೆಯಾಗಿದೆ. ಮೈಸೂರು ಒಡೆಯರ ಮನೆತನ ಜನರ ದೇಹದ ಬೆಳವಣಿಗೆಯನ್ನೇ ವಿಶೇಷ ಶೈಲಿಯಾಗಿ ಮಾರ್ಪಾಟಾಗಿರುವುದು ಈ ಭಾಗದ ಭಿತ್ತಿಚಿತ್ರಗಳಲ್ಲಿ ನಿರೂಪಿಸಲಾಗಿದೆ.

### ಶೈಲಿ

ತುಮಕೂರು ಜಿಲ್ಲೆ ಭಿತ್ತಿ ಚಿತ್ರಕಲಾಕೃತಿಗಳು ಸಾಂಪ್ರದಾಯಿಕ ಹಾಗೂ ಜಾನಪದ ಶೈಲಿಯಿಂದ ಕೂಡಿವೆ. ಸಾಂಪ್ರದಾಯಿಕ ಶೈಲಿಯಲ್ಲಿಯೂ ಭಿನ್ನತೆಯನ್ನು ಕಾಣಬಹುದಾಗಿದೆ. ಮೈಸೂರು ಶೈಲಿ ಪ್ರಭಲವಾಗಿ ಪ್ರಭಾವ ಬೀರಿರುವುದರಿಂದ ಜಾನಪದ ಕಲಾವಿದರು ಮೈಸೂರು ಸಾಂಪ್ರದಾಯಿಕ ಮಾದರಿಯ ಚಿತ್ರಗಳನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಆದರೂ ಅವುಗಳನ್ನು ಜಾನಪದ ಶೈಲಿ ಎಂದೇ ಪರಿಗಣಿಸಲಾಗಿದೆ. ಜಿಲ್ಲೆಯಲ್ಲಿ ಜಾನಪದ ಶೈಲಿಯ ಚಿತ್ರಗಳಿಲ್ಲ ಎನ್ನುವ ಮಾತಿನಲ್ಲಿ ತಿರುಳಿಲ್ಲ ಎನ್ನುವುದನ್ನು ಅ.ಲ.ನರಸಿಂಹನ್‌ರವರು ಸ್ಪಷ್ಟಪಡಿಸಿದ್ದಾರೆ. ಬೆನಕನಕೆರೆಯ ಭಿತ್ತಿ ಚಿತ್ರಗಳು "ಕರ್ನಾಟಕ ಜನಪದ ಶೈಲಿಯ ಭಿತ್ತಿ ಚಿತ್ರಗಳ ದೃಷ್ಟಿಯಿಂದ ಇಲ್ಲಿಯ ಚಿತ್ರಗಳು ಮುಖ್ಯವಾದುದು."[೪] ಈ ಹೇಳಿಕೆಯು ಕರ್ನಾಟಕದಲ್ಲಿ ಜನಪದ ಕಲೆ ಇಲ್ಲವೆಂದು ಹೇಳುವವರಿಗೆ ನಿದರ್ಶವಾಗಿದೆ.

ಕೆರೆಗೋಡಿಯ ಭಿತ್ತಿಚಿತ್ರಗಳಲ್ಲಿ ಮೂರು ಅಂಕಣಗಳಲ್ಲಿ ಎರಡು ಅಂಕಣಗಳೂ ಜನಪದ ಶೈಲಿಯ ಚಿತ್ರಗಳಾಗಿವೆ. ಚಿತ್ರಗಳಿಗೆ ಬಾಹ್ಯರೇಖೆಯೇ ಜೀವಾಳವಾಗಿದೆ. ಹಾಗಲವಾಡಿಯ ಭಿತ್ತಿ ಚಿತ್ರಗಳು ಜಾನಪದ ಶೈಲಿಯಲ್ಲಿದ್ದವು ಎನ್ನುವುದನ್ನು ಡಾ.ಬಿ.ನಂಜುಂಡಸ್ವಾಮಿ ರವರು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಕೆಲವು ಚಿತ್ರಗಳು ಹಸ್ತಪ್ರತಿ, ಚಿಕಣಿ ಚಿತ್ರದಿಂದ ಕೂಡಿದ್ದವು. ಯಡೆಯೂರಿನ ಚಿತ್ರಮಠ ಮತ್ತು ಗವಿಮಠದ ಹಸ್ತಪ್ರತಿಗಳಲ್ಲಿ ಭಿತ್ತಿ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಸಂಗ್ರಹವಾಗಿದ್ದವು. ಈ ಚಿತ್ರಗಳು ಮಿನಿಯೇಚರ್ ಶೈಲಿಯಿಂದ ಕೂಡಿದ್ದವು ಎನ್ನುವುದು ಅವರ ಅಭಿಪ್ರಾಯವಾಗಿದೆ. ವಿಜಯನಗರ ಶೈಲಿಯ ಚಿತ್ರಗಳು ಚಪ್ಪಟೆ ಬಣ್ಣದಿಂದ ಕೂಡಿದ್ದು, ಜಾನಪದ ದೃಷ್ಟಿಯನ್ನು ತೋರುತ್ತವೆ. ಈ ಕಾರಣದಿಂದ ಹಂಪಿಯ ವಿರೂಪಾಕ್ಷ ದೇವಾಲಯದ ಚಿತ್ರಗಳು ಜಾನಪದ ಶೈಲಿಯಿಂದ ಕೂಡಿವೆ ಎನ್ನುವುದು ಶಿವರಾಮಕಾರಂತರ ಅಭಿಪ್ರಾಯವಾಗಿದೆ.[೫] ಕೆರೆಗೋಡಿ ಮತ್ತು ಬೆನಕನಕೆರೆಯ ಚಿತ್ರಗಳು ಒಂದೇ ಮಾದರಿಯಾಗಿರದೆ ಅಲ್ಪಸ್ವಲ್ಪ ಬದಲಾವಣೆಯನ್ನು ಹೊಂದಿವೆ. ಕೆರೆಗೋಡಿಯ ಭಿತ್ತಿ ಚಿತ್ರಗಳು ಕಲಾ ವಲಯದಲ್ಲಿ ಮಹತ್ತರವಾದ ಹೆಜ್ಜೆಗುರುತು ತೋರಿಸಿದೆ. ಎರಡು ಅಂಕಣದ ಜಾನಪದ ಚಿತ್ರಗಳು,

ಒಂದು ಅಂಕಣದಲ್ಲಿ ಮೈಸೂರು ಶೈಲಿಯ ತ್ರಿಪುರಸಂಹಾರದ ಚಿತ್ರಗಳು ಸಾಂಪ್ರದಾಯಿಕ ಭಿತ್ತಿಚಿತ್ರಗಳ ಶೈಲಿಯಲ್ಲಿವೆ. ತ್ರಿಪುರ ಸಂಹಾರದ ಚಿತ್ರಗಳ ಹಿನ್ನೆಲೆಯು ಮೈಸೂರು ಅರಮನೆ ಹಾಗೂ ಗೋಪುರಗಳ ಮಾದರಿಯನ್ನು ಬಳಸಿಕೊಳ್ಳಲಿದೆ. ದೇವತಾ ಮೂರ್ತಿಗಳ ಕಣ್ಣುಗಳು ಸಿರಾ ಸಿಬಿಯ ಚಿತ್ರಗಳನ್ನ ಹೋಲಿದರೂ ದೇಹದ ಆಕಾರದಲ್ಲಿ ಬದಲಾವಣೆಯನ್ನು ಕಾಣುತ್ತೇವೆ. ಮೈಸೂರು ಪರಿಸರದ ವೇಷ ಭೂಷಣಗಳು, ಆಭರಣ ಹಾಗೂ ದೇಹಾಕಾರದಲ್ಲಿ ಬದಲಾವಣೆ ಇದೆ. ಹಾಗಾಗಿ ಮೈಸೂರು ಶೈಲಿಯು ಬೇರೆ ಶೈಲಿಗಿಂತ ಭಿನ್ನವಾಗಿ ಗುರುತಿಸಿಕೊಂಡಿದೆ.

ಚಿತ್ರಗಳು ಆಯಾ ಪ್ರದೇಶದ ಪ್ರಾದೇಶಿಕ ಕಲಾಶೈಲಿಯ ಚಿತ್ರಗಳು ಎಂಬುದಾಗಿ ಪ್ರತ್ಯೇಕಗೊಳಿಸಬಹುದಾಗಿದೆ. ವಿಜಯನಗರದ ಶೈಲಿ, ಬಿಜಾಪುರ ಆದಿಲ್‌ಶಾಹಿ ಶೈಲಿ, (ದಖ್ಖನ್) ಸುರುಪುರ ಶೈಲಿ, ತಂಜಾವೂರು ಶೈಲಿ, ಮೈಸೂರು ಶೈಲಿಯ ಚಿತ್ರಗಳನ್ನು ಒಟ್ಟಾಗಿ ನೋಡಿದಾಗ ತುಮಕೂರು ಜಿಲ್ಲೆಯ ಭಿತ್ತಿಚಿತ್ರಗಳನ್ನು ಶೈಲಿ ಸುಲಭವಾಗಿ ಬೇರ್ಪಡಿಸಬಹುದು. ಹಾಗೆಯೇ ಮೈಸೂರು ಶೈಲಿಯು ಮೇಲಿನ ಕಲಾಶೈಲಿಗಿಂತ ಭಿನ್ನವಾಗಿದೆ. ಮೈಸೂರು ಶೈಲಿಯಲ್ಲಿ ವಿಶೇಷವಾಗಿ ಗುರುತಿಸುವುದು ದೇಹಾಕೃತಿ, ಆಭರಣ, ವಸ್ತ್ರವಿನ್ಯಾಸ, ಸಂಯೋಜನೆ ಮತ್ತು ಮೈಸೂರು ವಾಸ್ತು ವಿನ್ಯಾಸಗಳನ್ನು ಬಳಸಿರುವುದು. ವಿಜಯನಗರದ ಚಿತ್ರ ಶೈಲಿಯಲ್ಲಿ ಹಿನ್ನೆಲೆಯಾಗಿ ವಿಜಯನಗರದ ವಾಸ್ತು ವಿನ್ಯಾಸವನ್ನು ಬಳಸಿರುವುದು. ಮೈಸೂರು ಶೈಲಿಯಲ್ಲಿ ಹಿನ್ನೆಲೆಯಾಗಿ ಅರಮನೆಯ ವಾಸ್ತು ವಿನ್ಯಾಸವನ್ನು ಬಳಸಲು ಪ್ರಭಾವಿಯಾಗಿದೆ. ಇದೂ ಕೂಡ ಪ್ರಾದೇಶಿಕ ಬದಲಾವಣೆಯೇ ಸರಿ. ಉದಾಹರಣೆಗೆ, ರಾಜಸ್ಥಾನ, ಕಿಶನಘಡ್, ಬುಂದಿ, ಮೇವಾರ್, ಕಾಳೀಘಾಟ್ ಚಿತ್ರಶೈಲಿಯಲ್ಲಿ ಆಯಾ ಪ್ರದೇಶದ ಪ್ರಾಕೃತಿಕ ಹಿನ್ನೆಲೆಯನ್ನು ಹೇರಳವಾಗಿ ಬಳಸಿರುವುದು ಕಂಡುಬರುತ್ತದೆ.

ಮಧುಬನಿ ಚಿತ್ರಕಲೆಯಲ್ಲಿ ಪರ್ಶಿಯಾ ಮತ್ತು ಟರ್ಕಿ ದೇಶಗಳ ವಾಸ್ತು ಶಿಲ್ಪದ ಪ್ರಭಾವ ಹಾಗೂ ಅನುಕರಣೆಯನ್ನು ಗುರುತಿಸಬಹುದು. ಚಿಕಣಿ ಚಿತ್ರದಲ್ಲಿಯೂ ಎರಡೂ ದೇಶದ ಪ್ರಭಾವವಿದ್ದು ವಾಸ್ತು ಪರ್ಶಿಯಾ ಶೈಲಿಯಲ್ಲಿದ್ದು, ನಿಸರ್ಗ, ಕಟ್ಟಡಗಳು ಇತ್ಯಾದಿ ದಖನಿಶೈಲಿಯ ಸ್ಪರ್ಶತೆ ಇದೆ." ಪರ್ಶಿಯಾ ಮತ್ತು ಟರ್ಕಿ ದೇಶದ ಕಲಾವಿದರು ದಖನಿನ ಕಲಾವಿದರು ಸೇರಿ ರಚನೆಗೊಂಡ ಚಿತ್ರಶೈಲಿಗೆ ಅಹ್ಮದನಗರ ಶೈಲಿ ಎಂದು ಗುರುತಿಸಿಕೊಂಡಿದೆ.[೬]

ಮೈಸೂರು ಶೈಲಿಯು ಮೂಲತಃ ವಿಜಯನಗರ ಶೈಲಿಯಾಗಿದ್ದು. ಅಲ್ಲಿಯ ಕಲಾವಿದರಿಗೆ ಆಶ್ರಯ ನೀಡಿದ ಮೈಸೂರು ಅರಸರು ಇಲ್ಲಿಯ ಪ್ರಾದೇಶಿಕ ಕೆಲವು ಬದಲಾವಣೆಯಿಂದ ಪ್ರಾರಂಭದಲ್ಲಿ ವಿಜಯನಗರ ಶೈಲಿಯೇ ಆಗಿದ್ದರು. ಕ್ರಮೇಣ ತನ್ನದೇ ಆದ ವಿಶಿಷ್ಟ ಶೈಲಿಯಾಗಿ ಗುರುತಿಸಿಕೊಂಡಿದೆ.

ಕೆರಗೋಡಿಯ ತ್ರಿಪುರಸಂಹಾರ, ರಂಗಾಪುರದ ಭಿತ್ತಿ ಚಿತ್ರಗಳು ಮೈಸೂರು ಶೈಲಿಯ ಭಿತ್ತಿ ಚಿತ್ರಗಳಾಗಿವೆ. ತ್ರಿಪುರಸಂಹಾರ ಚಿತ್ರದಲ್ಲಿ ಅತಿಯಾದ ಆಭರಣ ಹಿನ್ನೆಲೆಯ ಪ್ರಭಾವಳಿ ಮತ್ತು ಛತ್ರಿ, ದೇವತೆಗಳ ವಾಹನಗಳು ಮೈಸೂರಿನ ಅರಮನೆಯ ರಥಗಳ ಮಾದರಿಯಲ್ಲಿ ಇರುವುದು ಅವುಗಳ ಪ್ರಭಾವವೇ ಇಲ್ಲಿಯೂ ಕಾಣಬಹುದು. ದೇಹದ ರಚನೆಯಲ್ಲಿ ಕುಬ್ಜವಾದ ಆಕೃತಿಯಿಂದ ಕೂಡಿದ್ದು

ದುಂಡು ದುಂಡಾಗಿ ರಚಿಸಲಾಗಿದೆ. ವಿಜಯನಗರ ಶೈಲಿಯಲ್ಲಿದೇಹಗಳು ಬಾಗಿದ್ದು ಸಪೂರು ಸೊಂಟ, ನೀಳವಾದ ಕೈ, ಬೆರಳುಗಳು, ಚೂಪಾದ ಮೂಗು ಹೊಂದಿರುತ್ತವೆ. ಮತ್ತು ಬಹುತೇಕ ಚಿತ್ರಗಳು ಪಾರ್ಶ್ವ ಮುಖವನ್ನು ಹೊಂದಿದವುಗಳಾಗಿವೆ. ಮೈಸೂರು ಶೈಲಿಯ ಕಲಾಕೃತಿಗಳಲ್ಲಿ ಆಭರಣಕ್ಕೆ ಹೆಚ್ಚು ಒತ್ತು ನೀಡಲಾಗಿದೆ. ಬಿಡಿ ಚಿತ್ರಗಳು ಹೆಚ್ಚಾಗಿದ್ದು ಅವುಗಳು ಚಿತ್ರದ ಮೇಲೆ ಲೇಪಿಸುವ ವರ್ಣರಂಜಿತ ಹೊಳಪಿನ ಚಿನ್ನದ ಹಾಳೆಯು ಈ ಶೈಲಿಯ ವಿಶೇಷವಾಗಿದೆ. ಹಾಗೂ ಪಾರ್ಶ್ವ ಮತ್ತು ತ್ರಿಭಂಗಿಯ ಮುಖಗಳ ಹೆಚ್ಚಾಗಿ ಕಂಡು ಬರುತ್ತವೆ.

ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳು ಮೈಸೂರು ಒಡೆಯರ ಹಾಗೂ ಟಿಪ್ಪುಸುಲ್ತಾನನ ಆಶ್ರಯದೊಂದಿಗೆ ಬೆಳೆದು ಬಂದಿವೆ. ಇಂತಹ ಚಿತ್ರಗಳು ಅಲ್ಲಲ್ಲಿ ಕಂಡುಬರುತ್ತವೆ. ಸಿಬಿ ಭಿತ್ತಿ ಚಿತ್ರಗಳು ವಿಜಯನಗರ ಶೈಲಿಗೆ ಹೋಲಿಕೆಯಾದರೂ ಮೈಸೂರು ಒಡೆಯರು ಮತ್ತು ಟಿಪ್ಪುಸುಲ್ತಾನನು ಪೋಷಿಸಿರುವುದರಿಂದ ಈ ಚಿತ್ರಗಳು ಮೈಸೂರು ಸಾಂಪ್ರದಾಯಿಕ ಹಾಗೂ ಸಾಮಾಜಿಕ ಚಿತ್ರಗಳು ಜನಪದ ಶೈಲಿಯನ್ನು ಹೋಲುತ್ತವೆ. ಸಿಬಿ ಚಿತ್ರಗಳಲ್ಲಿ ದೇವಾಲಯದ ಚಂದ್ರಹಾಸದಲ್ಲಿರುವ ಚಿತ್ರಗಳು ಧಾರ್ಮಿಕ ಚಿತ್ರಗಳಾಗಿದ್ದು, ಗೋಪುರದ ತಳಭಾಗದ ಛಾವಣಿಯಲ್ಲಿರುವ ಚಿತ್ರಗಳು ಸಾಮಾಜಿಕ ಚಿತ್ರಗಳಾಗಿವೆ. ಇವುಗಳಲ್ಲಿ ಸಾಮಾಜಿಕ ಚಿತ್ರಗಳು ಬಹುತೇಕ ಜಾನಪದ ಶೈಲಿಯನ್ನು ಹೋಲಿದರೆ, ಧಾರ್ಮಿಕ ಚಿತ್ರಗಳು ಸಾಂಪ್ರದಾಯಿಕ ಭಿತ್ತಿ ಚಿತ್ರ ಶೈಲಿಯನ್ನು ಹೋಲುತ್ತವೆ.

ಸಿರಾ ರೇವಣಸಿದ್ಧೇಶ್ವರ ದೇವಾಲಯದ ಚಿತ್ರಗಳು ವಿಜಯನಗರದ ಅಂತಿಮಕಾಲದ ಚಿತ್ರಗಳು ಎಂದು ಅ.ಲ.ನರಸಿಂಹನ್‌ರವರು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿನ ಚಿತ್ರಗಳು ಬಹುತೇಕ ವಿಜಯನಗರ ಶೈಲಿಯಲ್ಲಿದ್ದು ಸುರಪುರದ ಪ್ರಭಾವವನ್ನು ಇಲ್ಲಿನ ಚಿತ್ರಿಗಳಲ್ಲಿ ಕಾಣುತ್ತೇವೆ. ಎಲ್ಲಾ ಚಿತ್ರಗಳಲ್ಲಿಯೂ ಬಳಸಿರುವ ತೂಗು ದೀಪಗಳು ಸುರಪುರಶೈಲಿಯ ವಿಶೇಷ ಸುರಪುರ ಶೈಲಿಯ ಕಲಾವಿದರು ಇಲ್ಲಿಯೂ ಸಹ ಚಿತ್ರ ರಚನಾ ಕಾರ್ಯದಲ್ಲಿ ತೊಡಗಿರುವುದು ಖಚಿತವಾಗುತ್ತದೆ. ಆದರೆ ತೂಗುದೀಪಗಳು ಯಥಾವತ್ತಾಗಿರದೆ ಮೈಸೂರು ಬೀದಿ ದೀಪಗಳು ಹಾಗೂ ಅರಮನೆಗೆ ಬಳಸಿರುವ ದೀಪಗಳ ಮಾದರಿಯನ್ನು ಹೋಲುತ್ತೆ. ಬಳಸಿರುವ ವಿಧಾನ ಒಂದೇ ತೆರನಾಗಿದೆ. ಹಿನ್ನೆಲೆಯ ಬಣ್ಣವು ಹಂಪಿ ಚಿತ್ರಶೈಲಿಯಲ್ಲಿದ್ದು ಹಾಗೂ ಸಂಯೋಜನೆ ಒಂದೇ ರೀತಿಯಾಗಿದೆ. ಕಲಾವಿದನು ಚಿತ್ರರಚನೆಯನ್ನು ಸಣ್ಣ ಸಣ್ಣ ಅಂಕಣಗಳಾಗಿ ವಿಂಗಡಿಸಿಕೊಂಡಿರುವುದು ಕೆರಗೋಡಿ, ರಂಗಾಪುರ, ಸಿರಾ, ಸಿಬಿ ಭಿತ್ತಿ ಚಿತ್ರಗಳು- ಇದೇ ಶೈಲಿಯಲ್ಲಿ ವಿಂಗಡಿಸಿಕೊಂಡು ಚಿತ್ರ ರಚಿಸಲಾಗಿದೆ. ದೇವದೇವತೆಯ ಕಿರೀಟಗಳು ಪ್ರಾದೇಶಿಕ ವಾಸ್ತು ಕಟ್ಟಡಗಳ ಶಿಖರದಂತೆ ರಚಿಸಲಾಗಿದೆ. ಹಂಪಿಯ ಶೈಲಿಯಲ್ಲಿ ವಿಜಯನಗರದ ವಾಸ್ತು ಶೈಲಿಯಲ್ಲಿ ಕಿರೀಟಗಳನ್ನು ರಚಿಸಲಾಗಿದೆ. ಪ್ರಾರಂಭಿಕ ಹಂತದಲ್ಲಿ ವಿಜಯನಗರ ಶೈಲಿಯನ್ನೇ ಪ್ರತಿಬಿಂಬಿಸಿದರು ನಂತರದ ದಿನಗಳಲ್ಲಿ ಕಲಾವಿದರು ಅರಸರಿಗೆ ಇಷ್ಟವಾಗುವ ರೀತಿಯಲ್ಲಿ ಅಲ್ಲಿನ ಸುತ್ತಮುತ್ತಲಿನ ಪರಿಸರವು, ಧರಿಸುವ ಬಟ್ಟೆ, ಆಭರಣ ಹಾಗೂ ದೇಹರಚನೆಯನ್ನು ಅನುಸರಿಸುವುದು ಕಲಾವಿದರ ಅನಿವಾರ್ಯವಾಗಿರುತ್ತದೆ. ಉದಾಹರಣೆಗೆ ಮೊಗಲ್ ಶೈಲಿಯು ಪರ್ಶಿಯ ಮತ್ತುಟರ್ಕಿಯ

ಕಲಾವಿದರಿಂದರು ಕ್ರಮೇಣ ದಕ್ಷಿಣ ಭಾರತದ ಪ್ರಕೃತಿ ಹಾಗೂ ವಾಸ್ತುಶಿಲ್ಪವನ್ನು ಸ್ಥಳೀಯವಾಗಿ ಬಳಸಿ ಮೊಗಲ್ ಶೈಲಿಯಾಗಿ ಉದಯವಾಯಿತು. ಹಾಗೆಯೇ ವಿಜಯನಗರ, ಮರಾಠಿ, ಸುರಪುರ ಶೈಲಿಯ ಪ್ರಭಾವವಿದ್ದರೂ ಕಾಲಕ್ರಮೇಣ ಶೈಲಿಯು ಬದಲಾವಣೆಗೆ ತೆರೆದುಕೊಂಡಿದೆ.

ಒಟ್ಟಾರೆಯಾಗಿ ಹಲವು ಶೈಲಿಗಳ ಸಮಿಶ್ರಣ ಎಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ವಿಜಯನಗರದ ಶೈಲಿಗೆ ಮೊಗಲ್ ಶೈಲಿ, ಮರಾಠಿ ಶೈಲಿಗಳು ಮಿಲನವಾಗಿವೆ. ಹಾಗೇಯೇ ಸುರ ಪುರಶೈಲಿಯೂ ವಿಜಯಗರ ಶೈಲಿಯ ಮುಂದುವರೆದ ಭಾಗ ಎಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಈ ಎಲ್ಲ ಶೈಲಿಯ ಕಲಾವಿದರು ಕೊನೆಕಾಲದ ಜೀವನೋಪಾಯಕ್ಕಾಗಿ ರಾಜಾಶ್ರಯ ಅರಸಿ ಬಂದರು ಎಂಬುದು ತಿಳಿದು ಬರುತ್ತದೆ. ಮೈಸೂರು ಅರಸರು ಕಲೆಯ ಬಗ್ಗೆ ಹೆಚ್ಚಿನ ಆಸಕ್ತಿ ಹೊಂದಿದವರಾಗಿದ್ದು ಕಲೆಯ ಆಶ್ರಯದಾತರಾಗಿದ್ದರು ಎಂಬುದು ಇತಿಹಾಸಾರ್ಹ. ಹೀಗೆ ಎಲ್ಲಾ ಶೈಲಿಯ ಕಲೆಯ ಶೈಲಿಗಳು ಮೈಸೂರು ಶೈಲಿಯಲ್ಲಿ ಮಿಳಿತಗೊಂಡಿವೆ ಎನ್ನುವುದು ಸತ್ಯಸಂಗತಿ. ಆದರೆ ಪ್ರಾರಂಭಿಕ ಹಂತದಲ್ಲಿ ಮಠ, ದೇವಾಲಯ ಹಾಗೂ ಅರಮನೆಯಲ್ಲಿಗೆ ಮಾತ್ರ ಸೀಮಿತವಾಗಿದ್ದ ಚಿತ್ರಕಲೆಯು ಬಿಡಿ ಚಿತ್ರಗಳಾಗಿ ಹೆಚ್ಚು ಹೆಚ್ಚು ಪ್ರಚಲಿತಗೊಂಡಿದ್ದು ಮೈಸೂರ ಸಾಂಪ್ರದಾಯಿಕ ಶೈಲಿಯಲ್ಲೇ. ದೇವಾಲಯ ಮಠಗಳಲ್ಲಿ ಈ ಮೇಲಿನ ವಿಜಯನಗರ ಶೈಲಿಯ ಪ್ರಭಾವ ಹೆಚ್ಚು ಕಂಡರು ಬಿಡಿ ಚಿತ್ರಗಳು ತನ್ನದೇ ಆದ ವಿಶೇಷ ಶೈಲಿಗೆ ತೆರೆದುಕೊಂಡಿದೆ. ಇಂತಹ ಹಲವಾರು ಕಲಾಕೃತಿಗಳು ತುಮಕೂರು ಜಿಲ್ಲೆಯ ಹಳ್ಳಿಹಳ್ಳಿಗಳಲ್ಲಿ, ತಾಲ್ಲೂಕು ಕೇಂದ್ರಗಳಲ್ಲಿ ಹೇರಳವಾಗಿ ದೊರೆಯುತ್ತವೆ. ತುಮಕೂರು ಜಿಲ್ಲೆಯ ಬಿಡಿ ಮೈಸೂರು ಶೈಲಿ ಬಿಡಿ ಚಿತ್ರಗಳು ಎನ್ನುವ ಅಧ್ಯಯಕ್ಕೆ ಅಗತ್ಯಕ್ಕಿಂತ ಹೆಚ್ಚು ಚಿತ್ರಮಾಹಿತಿಗಳು ದೊರಕುತ್ತವೆ. ಈ ಎಲ್ಲಾ ಪರಿಕಲ್ಪನೆಯು ತುಮಕೂರು ಜಿಲ್ಲೆಯ ಭಿತ್ತಿ ಚಿತ್ರದ ಮೇಲೆ ಪ್ರಭಾವ ಬೀರಿದೆ ಎಂದು ತೋರುತ್ತದೆ.

ಕಲೆ ವಾಸ್ತು ಶಿಲ್ಪಗಳಲ್ಲಿ ಕಾಲಾನುಕಾಲದಿಂದ ಒಂದರಿಂದ ಮತ್ತೊಂದು ಪ್ರಭಾವಕ್ಕೆ ಒಳಗಾಗಿರುವುದು ಅಜಂತಾ ಭಿತ್ತಿಚಿತ್ರಗಳಿಂದ ೧೯ನೇ ಶತಮಾನದವರೆಗೂ ಕಲೆಯ ಮೂಲವಾಗಿ ಒಂದರ ಪ್ರಭಾವ ಮತ್ತೊಂದಕ್ಕೆ ಒಂದರ ಅನುಕರಣೆ ಮತ್ತೊಂದರಲ್ಲಿ ಹಾಗೂ ತಂತ್ರಗಾರಿಕೆಯಲ್ಲಿಯೂ ಮರುತಿರುಗುವಿಕೆಯನ್ನು ಪುನರಾವರ್ತಿಯಾಗಿ ಕಂಡು ಬಂದ ನಂತರ ಸ್ವತಂತ್ರ ಶೈಲಿಯಾಗಿ ಹೊರಹೊಮ್ಮುತ್ತವೆ. ಆದಿ ಮಾನವನು ಚಿತ್ರಕ್ಕೆ ಯೋಗ್ಯವಾದ ಸ್ಥಳವನ್ನು ಬೀಸಿಲು, ಮಳೆಗೆ ಹೊಂದಿಕೆಯಾಗುವ ಭಿನ್ನವಾದ ಚಿತ್ರಗಳನ್ನು ರಚಿಸಿರುವುದು ಹಾಗೂ ಸಂಯೋಜನೆಯು ಅಂದಿನಿಂದಲೂ ತನ್ನದೇ ಆದ ಮಾದರಿಯಲ್ಲಿ ನಿರೂಪಿಸಿರುವ ಕಾಣುತ್ತೇವುದು. ಕೊರೆದ ಚಿತ್ರ. ಕುಟ್ಟಿದ ಚಿತ್ರಗಳು ಬಾಹ್ಯ ಪ್ರದೇಶದಲ್ಲಿ ಬಂಡೆಯ ಮೇಲೆ ಚಿತ್ರಿಸಿದ್ದಾರೆ. ರೇಖೆ ಚಪ್ಪಟೆ ಬಣ್ಣದ ಚಿತ್ರಗಳು ಗುಹೆ ಅಥವಾ ಬಂಡೆಯಾಶ್ರಯ ಸ್ಥಳಗಳನ್ನು ಆಯ್ಕೆಮಾಡಿಕೊಳ್ಳುವುದು ಅಂದಿನ ತಂತ್ರಗಾರಿಕೆಯಾಗಿದೆ. ಶೈಲಿ, ತಂತ್ರ, ಪ್ರಭಾವ, ಪ್ರೇರಣೆಗಳು ಆದಿಮ ಕಾಲದ ಚಿತ್ರಗಳಿಂದಲೂ ಪುನಾರವರ್ತಿತವಾಗಿರುವುದು ಕಾಣುತ್ತೇವೆ.

## ಅಡಿಟಿಪ್ಪಣಿ

೧. ಶಂಕರ ಪಾಟೀಲ, ಚಿತ್ರಕಲಾ ಚಿಂತನೆ, ಪುಟ-೧೦

೨. ಡಾ.ಕಾಶಿನಾಥ ಅಂಬಲಗಿ, ಸೌಂದರ್ಯಶಾಸ್ತ್ರ, ಪುಟ-೨೫೪

೩. ಡಾ.ಅ.ಲ.ನರಸಿಂಹನ್, ಕರ್ನಾಟಕ ಭಿತ್ತಿ ಚಿತ್ರ ಪರಂಪರೆ

೪. ಡಾ.ಅ.ಲ.ನರಸಿಂಹನ್, ಹೊಂಬೆಳಕು, ಪುಟ-೧೦

೫. ಡಾ.ಶಿವರಾಮಕಾರಂತ, ಕಲಾಪ್ರಪಂಚ, ಪುಟ-೪೦೬

೬. ಎಸ್.ಕೆ.ಅರುಣಿ, ದಖನಿ ಚಿತ್ರಕಲೆ, ಪುಟ-೨೩

# ಭಿತ್ತಿ ಚಿತ್ರಗಳ ಸಧ್ಯದ ಸ್ಥಿತಿ-ಗತಿ ಸಂರಕ್ಷಣೆಯ ಮಾರ್ಗೋಪಾಯಗಳು

ತುಮಕೂರು ಜಿಲ್ಲೆಯ ಹಲವಾರು ಭಾಗಗಳು ಭಿತ್ತಿ ಚಿತ್ರ ಸಂಪ್ರದಾಯಿಕ ಚಿತ್ರ ಜಾನಪದ ಚಿತ್ರ, ಹಾಗೂ ಜಾನಪದ ಕಲೆಗಳು ಮೈದುಂಬಿಕೊಂಡಿವೆ. ಆದರೆ ಎಲ್ಲಾ ಕಲೆಗಳು ಕಾಲದ ಅವಗಡಕ್ಕೆ ಸಿಲುಕಿ ಕಾಲಾನುಗತಿಯಲ್ಲಿ ನಶಿಸುತ್ತಿವೆ. ಪ್ರತಿಯೊಂದು ಕಲೆಗೂ ಒಂದು ನಿಗದಿತ ಕಾಲ ಎಂದು ನಿಗಧಿಪಡಿಸಬಹುದು. ಅದಕ್ಕೆ ಅಜಂತ ಉತ್ತಮ ಉದಾಹರಣೆಯಾಗುತ್ತದೆ. ಹಾಗೆಯೇ ಪಾಶ್ಚಿಮಾತ್ಯ ಕಲೆಯು ಇದಕ್ಕೆ ಹೊರತೇನಲ್ಲ. ಪುನರುಜ್ಜೀವನ ಕಲೆಯಿಂದ ಪ್ರಾರಂಭಗೊಂಡು ಇಂದಿನ ಅಬ್ಸ್ಟ್ರಕ್ಟ್ ಆರ್ಟ್‌ತನಕ ಯಾವುದೇ ಕಲೆಯು ನೆಲೆನಿಂತಿಲ್ಲ. ಸಮಾಜದ ಸ್ಥಿತಿಗತಿಗನುಗುಣವಾಗಿ ಕಲಾವಿದನು ತನ್ನ ಸೃಜನಶೀಲತೆಯನ್ನು ಸಮಾಜಕ್ಕೆ ತೆರೆದಿಡುವಲ್ಲಿ ಪ್ರತಿಯೊಂದು ಸನ್ನಿವೇಷಗಳನ್ನು ತನ್ನೊಳಗೆ ಆಹ್ವಾನಿಸಿಕೊಂಡು ಸೃಜನಾತ್ಮಕ ಕಲೆಯನ್ನು ಕಲಾಕೃತಿಯನ್ನು ಹೊರಹಾಕುವುದು ಕಲಾವಿದನ ಆಧ್ಯಕರ್ತವ್ಯವಾಗಿದೆ.

ಈ ಹಿನ್ನೆಲೆಯಲ್ಲಿ ಅಜಂತಾ ಭಿತ್ತಿ ಚಿತ್ರಗಳು ಧರ್ಮಪ್ರಚಾರಕ್ಕಾಗಿ ಹುಟ್ಟಿಕೊಂಡ ಕಲೆಯಾಗಿ ಹಲವಾರು ಶತಮಾನಗಳು ತನ್ನ ಅಸ್ಥಿತ್ವವನ್ನು ಕಾಪಾಡಿಕೊಂಡಿವೆ. ಇತರೆ ಧರ್ಮಗಳ ಪ್ರಚಾರ ಅಥವಾ ದೃಷ್ಠಿಯಿಂದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಿನ್ನಲೆಯಲ್ಲಿ ಭಿತ್ತಿ ಚಿತ್ರಗಳು ೧೯ನೇ ಶತಮಾನದ ಅಂತ್ಯದವರೆಗೆ ಅತ್ಯಂತ ಉತ್ಕೃಷ್ಠ ಮಾಧ್ಯಮದ ಪ್ರಕಾರವೆನಿಸಿವೆ. ಇವು ಕಲಾಕ್ಷೇತ್ರದ ಹಾಗೂ ನಾಡಿನ ಸಾಂಸ್ಕೃತಿಕ ಹಿರಿಮೆಯನ್ನು ಎತ್ತಿ ಹಿಡಿದಿವೆ. ಆದರೆ ಇದೆ ಸಂಸ್ಕೃತಿ ಸಂಪ್ರದಾಯ ೨೦ನೇ ಶತಮಾನದ ಆಧುನಿಕ ಯುಗದ ಹೊಸತನ್ನು ಆಹ್ವಾನಿಸುವ ಅವಸರದಲ್ಲಿ ತಮ್ಮ ಹಿಂದಿನ ಸುಸಂಸ್ಕೃತ ಬದುಕನ್ನು ಮರೆತು ನಮ್ಮನ್ನು ನಾವು ಮರೆತುಹೋಗುವ ಸ್ಥಿತಿಯನ್ನು ತಲುಪಿದ್ದೇವೆ.

ಜಿಲ್ಲಾದ್ಯಂತ ಅತಿ ಹೆಚ್ಚು ಭಿತ್ತಿ ಚಿತ್ರಗಳಿದ್ದು ಅವುಗಳನ್ನು ಉಳಿಸಿಕೊಳ್ಳುವ ಗೋಜಿಗೆ ಪ್ರಸ್ತುತ ಯುವ ಜನತೆ ಹೋಗಿಲ್ಲ. ಆದ ಕಾರಣ ಭಿತ್ತಿ ಚಿತ್ರಕಲೆಯ ಸ್ಥಿತಿ ಅವಸಾನದತ್ತ ಸಾಗಿದೆ. ಹಾಳಾಗಿರುವ, ಹಾಳಾಗುತ್ತಿರುವ, ಸಾಧಾರಣ ಹಂತಗಳೆಂದು ಗುರುತಿಸಲಾಗಿದೆ. ಬಹುತೇಕ ಭಿತ್ತಿ ಚಿತ್ರಗಳು ಹಾಳಾಗಿದ್ದು

ಕೆಲವು ಮಾತ್ರ ಅವನತಿಯ ಹಂತದಲ್ಲಿದ್ದು ಇನ್ನು ಕೆಲವು ಸ್ವಲ್ಪಮಟ್ಟಿಗೆ ಸಾಧಾರಣವಾಗಿವೆ. ಭಿತ್ತಿ ಚಿತ್ರ ಪರಂಪರೆ ದಿನೇ ದಿನೇ ನಮ್ಮಿಂದ ಕಣ್ಮರೆಯಾಗುತ್ತಿದೆ. ತುಮಕೂರು ಜಿಲ್ಲೆಯಲ್ಲಿ ಸುಮಾರು ೧೬ನೆಲೆಗಳೆಂದು ಗುರುತಿಸಿದರೆ ಪ್ರಸ್ತುತ ಭಿತ್ತಿಚಿತ್ರಗಳ ಇರುವಿಕೆ ಕೇವಲ ೬ ನೆಲೆಗಳಲ್ಲಿ ಮಾತ್ರ. ಸಿಬಿ. ಕೆರೆಗೋಡಿ, ರಂಗಾಪುರ, ಬೆನಕೆನಕೆರೆ, ಅಮೃತೂರು, ಹೆಬ್ಬೂರುಗಳಲ್ಲಿ ಮಾತ್ರ ಭಿತ್ತಿಚಿತ್ರಗಳ ಇರುವಿಕೆ ಕಾಣುತ್ತೇವೆ. ಅದರಲ್ಲೂ ಬೆನಕನಕೆರೆ, ಹೆಬ್ಬೂರು, ಹಾಗೂ ಅಮೃತೂರು ನೆಲೆಗಳಲ್ಲಿ ಭಿತ್ತಿ ಚಿತ್ರಗಳ ಕುರುಹುಗಳನ್ನು ಮಾತ್ರ ಕಾಣಸುತ್ತೇವೆ. ಈ ಎಲ್ಲಾ ಭಿತ್ತಿ ಚಿತ್ರಗಳ ನೆಲೆಗಳ ವಿಸ್ತೃತ ವಿವರಣೆ ಇಲ್ಲಿದೆ.

ಸಿಬಿ ಲಕ್ಷ್ಮಿನರಸಿಂಹ ದೇವಾಲಯದ ಮುಖಮಂಟಪ ಹಾಗೂ ರಾಜ ಗೋಪುರದ ಛಾವಣಿ ಹಾಗೂ ತೊಲೆಗಳ ಮೇಲೆ ಭಿತ್ತಿ ಚಿತ್ರಗಳಿವೆ ಮುಖಮಂಟಪವನ್ನ ಒಂಬತ್ತು ಮುಖ್ಯ ಅಂಕಣವಾಗಿ ಮತ್ತೆ ಮುಖ್ಯ ಅಂಕಣಗವನ್ನು ಕಿರು ಅಂಕಣಗಳಾಗಿ ವಿಂಗಡಸಿ ಚಿತ್ರ ರಚನೆ ಮಾಡಲಾಗಿದೆ. ಈ ಭಿತ್ತಿ ಚಿತ್ರಗಳನ್ನು ಸುಮಾರು ೧೯ನೇ ಶತಮಾನದಲ್ಲಿ ರಚನೆ ಮಾಡಿದ್ದು ಪ್ರಸ್ತುತ ಈ ಭಿತ್ತಿ ಚಿತ್ರಗಳು ಒಂದು ಶತಮಾನವನ್ನು ದಾಟಿವೆ. ಕಾಲದ ವೈಪರಿತ್ಯಕ್ಕೆ ಭಿತ್ತಿ ಚಿತ್ರಗಳು ತನ್ನ ನಿಜ ಸ್ವರುಪವನ್ನು ಬದಲಿಸಿಕೊಳ್ಳುತ್ತಿದ್ದ ಸಂದರ್ಭವನ್ನು ಕಂಡ ಲಲಿತಕಲಾ ಅಕಾಡೆಮಿಯ ಪಿ.ಆರ್.ತಿಪ್ಪೇಸ್ವಾಮಿ, ನಂಜುಡರಾವ್‌ರವರ ನೇತೃತ್ವತಂಡ ಭಿತ್ತಿ ಚಿತ್ರಗಳ ಜೀರ್ಣೋದ್ಧಾರ ಕಾರ್ಯ ಕೈಗೆತ್ತಿಕೊಂಡಿತ್ತು. ನಂತರದ ದಿನಗಳಲ್ಲಿ ಹವಾಮಾನದ ವೈಪರಿತ್ಯಕ್ಕೆ ಹಾಗೂ ಬಳಸಿದ ರಾಸಾಯನಿಕ ವಸ್ತುಗಳು ಹೊಂದಾಣಿಕೆಯಾಗದೆ ಭಿತ್ತಿ ಚಿತ್ರದ ಮೇಲೆ ಬಿಳಿ ಗುಳ್ಳೆಗಳೆದ್ದು ಭಿತ್ತಿ ಚಿತ್ರಗಳು ಮತ್ತಷ್ಟು ಗುರುತನ್ನು ಕಳೆದುಕೊಂಡಿರುತ್ತವೆ.

ಲಕ್ಷ್ಮೀನರಸಿಂಹ ದೇವಾಲಯವು ವಿಜಯನಗರದ ಕಾಲದ್ದು ಎನ್ನಲಾಗಿದ್ದು ಸರಿಸುಮಾರು ನಾಲ್ಕೈದು ಶತಮಾನಗಳು ಕಳೆದಿದ್ದು ಪ್ರಕೃತಿ ವಿಕಾಸಕ್ಕೆ ಮೈ ಹೊಡ್ಡಿ ನಿಂತು ತನ್ನ ಆಯುಸ್ಸನ್ನು ಕಳೆದುಕೊಳ್ಳುತ್ತ ಬಂದಿದೆ. ಆದ ಕಾರಣ ಭಿತ್ತಿ ಚಿತ್ರಗಳಿರುವ ಮುಖ ಮಂಟಪದ ಛಾವಣಿಯು ಮಳೆ ನೀರಿಗೆ ತೊಯ್ದು ಚಾವಣಿಯ ಗಾರೆ ಭಿತ್ತಿಯು ತನ್ನ ಶಕ್ತಿಯನ್ನು ಕಳೆದುಕೊಂಡು ಕೆಲವು ಕಡೆ ಬಿದ್ದು ಹೋಗಿದೆ, ಬಿದ್ದು ಹೋದ ಜಾಗಕ್ಕೆ ದೇವಾಲಯದ ವ್ಯವಸ್ಥಾಪಕರು ಆಧುನಿಕ ಗಾರೆಯ ಲೇಪನ ಮಾಡಿದ್ದಾರೆ. ಭಿತ್ತಿ ಚಿತ್ರಗಳ ಅಲ್ಪಸ್ವಲ್ಪ ಜ್ಞಾನವಿರುವ ದೇವಾಲಯದ ಪುರೋಹಿತರು ಹಾಗೂ ವ್ಯವಸ್ಥಾಪಕರು ಭಿತ್ತಿ ಚಿತ್ರದ ಗಾರೆ ಭಿತ್ತಿಯು ಬಿದ್ದು ಹೋಗಿದ್ದರಿಂದ ಮುಖಮಂಟಪದ ಛಾವಣಿಯ ಮೇಲೆ ಗಾರೆ, ಅಂಚಿನ ಚೂರು ಮತ್ತು ಇಟ್ಟಿಗೆ ಚೂರಿನಿಂದ ಚುರಿಕೆ ಹಾಕಿಸಿ ಸ್ವಲ್ಪಮಟ್ಟಿಗಾದರೂ ಹಾಳಾಗುವುದನ್ನು ತಡೆಗಟ್ಟಿದ್ದಾರೆ.

ಭಿತ್ತಿಚಿತ್ರಗಳು ಅಧ್ಯಯನಕ್ಕೆ ಸೂಕ್ತವಾಗಿದ್ದು ಸ್ಥಳೀಯ ಕಲಾವಿದರು ಹಾಗೂ ವಿದ್ಯಾರ್ಥಿಗಳೊಂದಿಗೆ ಮರು ಕೃತಿ ರಚನೆಯ ಸಲುವಾಗಿ ನೇರವಾಗಿ ಭಿತ್ತಿ ಚಿತ್ರದ ಮೇಲೆ ಗಮ್‌ಟೇಪ್ ಅಂಟಿಸಿ ಟ್ರೇಸಿಂಗ್ ಮಾಡುವಾಗ ಗಮ್‌ಟೇಪ್‌ನ ಜೊತೆಯಲ್ಲಿ ಭಿತ್ತಿ ಚಿತ್ರಗಳ ಅಕ್ಕಳಿಕೆ ಎದ್ದು ಬಂದಿದ್ದು ಅದೂ ಕೂಡ ಭಿತ್ತಿ ಚಿತ್ರದ ಅವನತಿಗೆ ಕಾರಣವಾಗಿದೆ. ಪ್ರಸ್ತುತ ಭಿತ್ತಿ ಚಿತ್ರಗಳು ಶೇಕಡ ೬೦ ಭಾಗ ಗುರುತಿಸಲಾಗದ ಹಂತವನ್ನು ಕಲುಪಿವೆ. ಉಳಿದ ೪೦ ಭಾಗ ಭಿತ್ತಿ ಚಿತ್ರಗಳು ದೊಡ್ಡ ಗಾತ್ರದಲ್ಲಿರುವುದರಿಂದ

ಸ್ವಲ್ಪಮಟ್ಟಿಗೆ ಗುರುತಿಸಲು ಸಾಧ್ಯವಾಗಿದೆ. ಭಿತ್ತಿ ಚಿತ್ರಗಳ ಚಿಕ್ಕ ಚಿಕ್ಕ ಆವರಣದಲ್ಲಿ ಆ ಚಿತ್ರಕ್ಕೆ ಸಂಬಂಧಿಸಿದ ಅವತಾರ ಅಥವಾ ದೇವ ದೇವತೆಯರ ಧಾನವರ, ಮಾನವರ ಹಾಗೂ ಸಂದರ್ಭವನ್ನು ಸನ್ನಿವೇಷಕ್ಕೆ ತಕ್ಕಂತೆ ಅಕ್ಷರಗಳ ಹೊಂದಾಣಿಕೆ ಇದ್ದು, ಸುಲಭವಾಗಿ ಸಾಮಾನ್ಯ ಜನರೂ ಕೂಡ ಅರ್ಥ ಮಾಡಿಕೊಳ್ಳಬಹುದಿತ್ತು ಆದರೆ ಈಗ ಆ ಅಕ್ಷರಗಳನ್ನೂ ಕೂಡ ಗುರುತಿಸುವುದು ಅಸಾಧ್ಯವಾಗಿದೆ. ವಿಶೇಷವಾಗಿ ವಿಷ್ಣುವಿನ ವಿಶ್ವರೂಪದ ಚಿತ್ರವನ್ನು ಸ್ವಲ್ಪ ಮಟ್ಟಿಗೆ ಗುರುತಿಸಬಹುದಾಗಿದೆ.

ಭಿತ್ತಿ ಚಿತ್ರಗಳ ಜೀರ್ಣೋದ್ಧಾರದ ಸಂದರ್ಭದಲ್ಲಿ ಸಿಂಪಡಿಸಿದ್ದ ರಾಸಾಯನಿಕವು ಕ್ರಮೇಣ ಜೇಡರ ಬಲೆಯಂತ ಮಾದರಿಯ ಆಕಾರವನ್ನು ರೂಪಿಸಿ ಭಿತ್ತಿ ಚಿತ್ರಗಳ ಅಂದವನ್ನು ನೇರವಾಗಿ ವಿರೂಪಗೊಳಿಸಿದೆ. ಬಲೆಯಾಕಾರವು ಕಲಾವಿದರ ಚಿತ್ರವೇನೋ ಅನ್ನುವ ಮಟ್ಟಿಗೆ ಭಾಸವಾಗುತ್ತದೆ. ಇದು ಭಿತ್ತಿ ಚಿತ್ರಕ್ಕೆ ಅಂಟಿಕೊಂಡ ಮೂಲವ್ಯಾಧಿಯೆನಿಸಿದೆ, ಅಲ್ಲದೆ ವಿಶ್ವರೂಪಕ್ಕೆ ಜೇನು ಗೂಡು ಇಟ್ಟಿದ್ದರಿಂದ ದೇವಾಲಯಕ್ಕೆ ಬರುವ ಭಕ್ತಾಧಿಗಳಿಗೆ ಅಡ್ಡಿಯುಂಟಾದ್ದರಿಂದ ಜೇನು ಹುಳುಗಳನ್ನ ಸ್ಥಳಾಂತರಿಸುವ ಸಲುವಾಗಿ ಮಾಡಿದ ತಂತ್ರಗಳೂ ಸಹ ಭಿತ್ತಿ ಚಿತ್ರಗಳ ವಿನಾಶಕ್ಕೆ ನೇರವಾದ ಪರಿಣಾಮ ಬೀರಿವೆ. ಈ ಪರಿಣಾಮದಿಂದಾಗಿ ವಿಷ್ಣುವಿನ ವಿಶ್ವರೂಪವು ತನ್ನ ವರ್ಚಸ್ಸನ್ನು ಕಳೆದುಕೊಂಡು ಕಳೆಗುಂದಿದೆ.

ರಾಜಗೋಪುರದ ಛಾವಣಿಯಲ್ಲಿರುವ ಭಿತ್ತಿಯನ್ನು ೩ ಮುಖ್ಯ ಅಂಕಣವಾಗಿ ವಿಂಗಡಿಸಿಕೊಂಡಿದ್ದು ಒಂದೊಂದು ಅಂಕಣವನ್ನು ಚಿಕ್ಕ ಚಿಕ್ಕ ಅಂಕಣವನ್ನಾಗಿಸಿಕೊಂಡು ಚಿತ್ರರಚನೆ ಮಾಡಲಾಗಿದೆ. ಮಧ್ಯದ ಅಂಕಣವು ಪ್ರಕೃತಿ, ಸಾಮಾಜಿಕ, ಜೀವನಕ್ಕೆ ಸಂಬಂಧಿಸಿದ ಭಿತ್ತಿ ಚಿತ್ರಗಳಿಂದ ತುಂಬಿದ್ದು ಅಂಕಣದ ಎರಡು ಚಿಕ್ಕ ಚಿಕ್ಕ ಅಂಕಣಗಳ ಗಾರೆ ಭಿತ್ತಿಯು ಕಳಚಿ ಬಿದ್ದು, ಅಲ್ಲಿಗೆ ಆಧುನಿಕ ಗಾರೆ ಲೇಪನ ಮಾಡಲಾಗಿದೆ. ಉಳಿದ ಎರಡು ಮುಖ್ಯ ಅಂಕಣವು ಕಾಮಸೂತ್ರಕ್ಕೆ ಸಂಬಂಧಿಸಿದ ರತಿಲಾಸ್ಯ ಚಿತ್ರಗಳಿಗೆ ಮೀಸಲಿಟ್ಟಿದ್ದಾರೆ. ಅವುಗಳಲ್ಲಿ ಅಲ್ಲಲ್ಲಿ ಗಾರೆ ಭಿತ್ತಿಯು ಕಳಚಿ ಹೋಗಿದೆ ಇಲ್ಲಿಯ ಚಿತ್ರಗಳು ಸ್ವಲ್ಪ ಮಟ್ಟಿಗೆ ಗುರುತಿಸುವ ಹಂತದಲ್ಲಿವೆ, ಕಾರಣ ಈ ಚಿತ್ರಗಳು ರಾಜ ಗೋಪುರದ ಛಾವಣಿಯಲ್ಲಿದ್ದು ಬಿಸಲು ಮತ್ತು ಮಳೆಯ ಹಾವಳಿಗೆ ದೂರವಾಗಿವೆ. ಆದುದರಿಂದ ಈ ಚಿತ್ರಗಳು ಅಲ್ಪಸ್ವಲ್ಪ ಗುರುತಿಸಿ ಉಳಿಸಿ ಕೊಂಡಿವೆ. ತುಮಕೂರಿನ ಕೆರೆಕೋಡಿಯಲ್ಲಿದ್ದ ಪೌಜುದಾರ ನಲ್ಲಪ್ಪನವರ ಮನೆಯಲ್ಲಿ ಭಿತ್ತಿ ಚಿತ್ರಗಳನ್ನು ಪೌಜುದಾರ ನಲ್ಲಪ್ಪನವರೇ ಮೈಸೂರಿನ ನುರಿತ ಕಲಾವಿದರನ್ನು ಕರೆಯಿಸಿ ಚಿತ್ರರಚಿಸಿದ್ದರು.

ರಾಮಾಯಣ ಮಹಾಭಾರತದ ಕೆಲವು ದೃಷ್ಯಗಳು, ಭೇಟೆ, ದರ್ಬಾರಿನ ದೃಶ್ಯ, ಕುದುರೆಯೊಂದಿಗೆ ಸುಂದರಿಯರು, ಹಾಗೂ ರತಿ ಸಂಬಂಧಿ ಚಿತ್ರಗಳು ಕೆಂಪು ವರ್ಣದ ಹಿನ್ನೆಲೆಯಲ್ಲಿ ಉತ್ತಮವಾಗಿ ರಚನೆಗೊಂಡಿದ್ದು ಕಾಲಾನಂತರ ಆ ಮನೆಯನ್ನು ಸಂಪೂರ್ಣವಾಗಿ ಕೆಡವಿ ಅದೇ ಜಾಗದಲ್ಲಿ ನೂತನ ಮನೆಯೊಂದನ್ನು ನಿರ್ಮಿಸಲಾಗಿದೆ. ಪ್ರಸ್ತುತ ದಿನದಲ್ಲಿ ಭಿತ್ತಿ ಚಿತ್ರಗಳ ಯಾವುದೇ ಕುರುಹುಗಳು ಉಳಿದಿಲ್ಲ, ಆದರೆ ಅಂದು ತುಮಕೂರಿನ ಕಲಾವಿದರುಗಳಾದ ಬಾಬುರಾವ್ ಕುಂದಗೋಳ್, ಪಿ.ಪ್ರಸಾದ್, ಡೇವಿಡ್, ಅಶೋಕ್, ಕಿಶೋರ್ ಕುಮಾರ್, ಪ್ರಸನ್ನ, ಎಸ್.ಹೆಚ್.ನಾಗರಾಜು, ಸ್ವಾಮಿ, ಮುಂತಾದವರು

ನಕಲು ಮಾಡಿರುವುದು ಮಾತ್ರ ಉಳಿದಿವೆ ಅಲ್ಲದೆ ಇನ್ನು ಹೆಚ್ಚಿನ ಕಲಾಕೃತಿಗಳ ಛಾಯಾ ಚಿತ್ರಗಳು ಹಾಗೂ ಟ್ರೇಸಿಂಗ್ ಪೇಪರ್ ಕಿಶೋರ್ ಕುಮಾರ್‌ರವರಲ್ಲಿ ಸಂಗ್ರಹಗೊಂಡಿವೆ.

ಕೆರೆಗೋಡಿಯ ಶಂಕರೇಶ್ವರ ದೇವಾಲಯದ ಮುಖಮಂಟಪ (ಪಡಸಾಲೆ)ವನ್ನು ಪ್ರಮುಖ ಮೂರು ಅಂಕಣವನ್ನಾಗಿ ವಿಂಗಡಿಸಿಕೊಂಡು ತ್ರಿಪುರ ಸಂಹಾರ, ಶಿವಪಂಚವಿಂಶತಿ ೨೫ ಲೀಲೆಗಳು, ಹಾಗೂ ದಶಾಮಾರ ಸನ್ನಿವೇಶಗಳನ್ನು ಚಿತ್ರಿಸಿದ್ದಾರೆ. ತೊಲೆಗಳಲ್ಲಿ ಭಾಗವತ ಪುರಾಣವನ್ನು ನಿರೂಪಿಸಲಾಗಿದೆ. ಈ ದೇವಾಲಯದ ಭಿತ್ತಿ ಚಿತ್ರಗಳಲ್ಲಿ ತ್ರಿಪುರ ಸಂಹಾರ ಅಂಕಣವು ಉಳಿದ ಎರಡು ಅಂಕಣ ಚಿತ್ರರಚನೆ ಕಾರ್ಯಕ್ಕಿಂತ ಪೂರ್ವದಲ್ಲೇ ರಚಿಸಿರಬೇಕು. ತ್ರಿಪುರ ಸಂಹಾರದ ಚಿತ್ರಗಳು ಸುಮಾರು ಅರ್ಧದಷ್ಟು ಹಾಳಾಗಿದ್ದು ಉಳಿದ ಚಿತ್ರ ಸಂಯೋಜನೆ ಈಡೀ ಅಂಕಣಕ್ಕೆ ಜೀವಕಳೆ ತುಂಬಿದೆ. ಕೆಲವು ಚಿತ್ರಗಳ ಮುಖವೇ ಉದುರಿಹೋಗಿರುವುದರಿಂದ ಆ ಚಿತ್ರ ಯಾವುದು ಎಂದು ಗುರುತಿಸಲು ಸಾಧ್ಯವಾಗದಷ್ಟು ಹಾಳಾಗಿವೆ. ಇಲ್ಲಿಯ ಚಿತ್ರಗಳಿಗೆ ಯಾವುದೇ ರಾಸಾಯನಿಕ ಪ್ರಕ್ರಿಯೆ ಜರುಗಿದಂತೆ ಕಾಣುವುದಿಲ್ಲ, ಭಿತ್ತಿಚಿತ್ರದ ಮಹತ್ವ ತಿಳಿಯದ ನಾಗರೀಕರ ನಿರ್ಲಕ್ಷ್ಯವು ಇದಕ್ಕೆ ಕಾಣಿಕೆ ನೀಡಿದೆ. ಅಲ್ಲದೆ ಪ್ರತಿವರ್ಷ ದೇವಾಲಯದ ಜಾತ್ರಾ ಮಹೋತ್ಸವದ ಸಂದರ್ಭದಲ್ಲಿ ದೇವಾಲಯವನ್ನು ಸುಣ್ಣ ಬಣ್ಣಗಳಿಂದ ಸಿಂಗರಿಸುವ ಸಂದರ್ಭದಲ್ಲಿ ಭಿತ್ತಿ ಚಿತ್ರಗಳು ನಿರ್ಲಕ್ಷ್ಯಕ್ಕೆ ಒಳಗಾಗಿವೆ.

ಇತ್ತೀಚಿನ ದಿನಗಳಲ್ಲಿ ಭಿತ್ತಿ ಚಿತ್ರಗಳ ಇರುವಿಕೆಯು ಜಿಲ್ಲೆಯ ಕಲಾವಿದರಿಗೆ ತಿಳಿದು ಚಿತ್ರಕಲಾ ಶಾಲೆಯ ಶಿಕ್ಷಕರು ವಿದ್ಯಾರ್ಥಿಗಳೊಂದಿಗೆ ಕಲಾ ಶಿಬಿರದಂತಹ ಕಾರ್ಯಕ್ರಮಗಳನ್ನ ಹಮ್ಮಿಕೊಂಡು ಅಲ್ಲಿಯ ನಾಗರೀಕರಿಗೂ ಹಾಗೂ ದೇವಾಲಯದ ವ್ಯವಸ್ಥಾಪಕರಿಗೂ ಅರಿವು ಮೂಡಿಸುತ್ತಿದ್ದಾರೆ. ಸಧ್ಯದ ಪರಿಸ್ಥಿತಿಯು ಭಿತ್ತಿ ಚಿತ್ರಗಳು ನಾಗರೀಕರಿಂದ ಹಾಳಾಗುವುದನ್ನು ತಡೆದಂತಾಗಿದೆ. ಆದರೆ ಪ್ರಾಕೃತಿಕ ಸಹಜ ಕ್ರಿಯೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಅಲ್ಲಲ್ಲಿ ಗಾರೆ ಭಿತ್ತಿಯು ಬಿದ್ದುಹೋಗುತ್ತಿದೆ. ಅದರಲ್ಲಿ ದೇವಾಲಯದ ಅರ್ಚಕರು ಇತ್ತೀಚಿನ ದಿನಗಳಲ್ಲಿ ಭಿತ್ತಿಚಿತ್ರಗಳು ಪೂರ್ವಜರ ಪಳಯುಳಿಕೆ, ಸಾಂಸ್ಕೃತಿಕ ಕುರುಹು ಎಂಬುದು ಅರ್ಥವಾಗಿ ಭಿತ್ತಿ ಚಿತ್ರಗಳ ಸಂರಕ್ಷಣೆಗೆ ಮುಂದಾಗಿದ್ದಾರೆ. ಇದು ಉತ್ತಮ ಆರೋಗ್ಯಕರ ಬೆಳವಣಿಗೆ ಎಂದು ಹೇಳಬಹುದು.

ರಂಗಾಪುರದ ಭಿತ್ತಿ ಚಿತ್ರಗಳು ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ದಶಾವತಾರ ಚಿತ್ರಗಳಾಗಿವೆ. ಶ್ರೀರಂಗನಾಥಸ್ವಾಮಿ ದೇವಾಲಯದ ಮುಖಮಂಟಪವನ್ನು ಸಮನಾಗಿ ಮೂರು ಅಂಕಣವನ್ನಾಗಿಸಲಾಗಿದೆ. ಮಧ್ಯದ ಅಂಕಣದಲ್ಲಿ ಮಾತ್ರ ಕಾಣುತ್ತಿವೆ. ಉಳಿದ ಅಕ್ಕ ಪಕ್ಕದ ಅಂಕಣಗಳು ಖಾಲಿ ಇವೆ ಅವುಗಳಲ್ಲಿ ಚಿತ್ರಗಳು ರಚನೆಗೊಂಡಿದ್ದು ಕಾಲದ ವೈಪರಿತ್ಯಕ್ಕೆ ಹಾಗೂ ಸರಿಯಾದ ನಿರ್ವಹಣೆ ಇಲ್ಲದೆ ಹಾಳಾಗಿರಬಹುದು ಎನ್ನುವುದು ಕೆಲವರ ಅಭಿಪ್ರಾಯ ಆದರೆ ಪ್ರಸ್ತುತ ಖಾಲಿ ಇರುವ ಅಂಕಣವು ಭಿತ್ತಿ ಚಿತ್ರವಿದ್ದ ಯಾವುದೇ ಅಲ್ಪಸ್ವಲ್ಪ ಕುರುಹುಗಳು ಕಾಣುತ್ತಿಲ್ಲ.

ಭಿತ್ತಿ ಚಿತ್ರವಿರುವ ಅಂಕಣವು ಮಂಟಪದ ಮಧ್ಯಭಾಗದಲ್ಲಿದ್ದು ದಶಾವತಾರ ಚಿತ್ರಗಳಿಂದ ಆವೃತಗೊಂಡಿದೆ. ಆದರೆ ಮಧ್ಯಭಾಗದಲ್ಲಿರುವುದೇ ಅವುಗಳ ಉಳಿವಿಗೆ ತೊಡಕಾಗಿದೆ. ಏಕೆಂದರೆ

ದ್ವಾರಭಾಗಿಲಿನ ಮುಂದೆ ಹೋಮಕುಂಡವಿದ್ದು, ಸುತ್ತಮುತ್ತಲಿನ ಗ್ರಾಮದ ಜನರು ತಮ್ಮ ತಮ್ಮ ಅಹವಾಲುಗಳನ್ನು ದೇವರಲ್ಲಿ ಅರ್ಪಿಸುವ ಸಲುವಾಗಿ ಪ್ರತಿ ಅಮಾವಾಸೆಯಂದು ಜಾಗರಣ ಕೈಗೊಳ್ಳುವುದು ಇಂದಿಗೂ ನಡೆದುಕೊಂಡು ಬಂದಿರುವ ಪ್ರತೀತಿ. ಆದಕಾರಣ, ಶ್ರೀ ರಂಗನಾಥಸ್ವಾಮಿ ದೇವಾಲಯದ ಹಜಾರದಲ್ಲಿರುವ ಹೋಮಕುಂಡದಲ್ಲಿ ಹೋಮಹವನಗಳು ಜರುಗುವುದರಿಂದ, ಅದರ ಹೊಗೆಯ ನೇರ ಪರಿಣಾಮ ಭಿತ್ತಿಚಿತ್ರದ ಮೇಲೆ ಪ್ರಯೋಗವಾಗುತ್ತಿದೆ.

ಭಿತ್ತಿ ಚಿತ್ರಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ. ಈ ಚಿತ್ರಗಳೂ ಕೂಡ ಸುಮಾರು ೧೯ನೇ ಶತಮಾನದ ಅಂತ್ಯಭಾಗದಲ್ಲಿ ರಚನೆಯಾಗಿದ್ದು ಮೈಸೂರು ಸಾಂಪ್ರಾದಾಯಿಕ ಶೈಲಿಯ ಭಿತ್ತಿ ಚಿತ್ರಗಳಾಗಿದ್ದು ಬಾಹ್ಯ ರೇಖೆಗಳು ಅರ್ಥವತ್ತಾಗಿರುವುದರಿಂದ ಮತ್ತು ರೇಖೆಗಳಿಗೆ ವಿಶೇಷ ಒತ್ತು ನೀಡಿರುವುದರಿಂದ ಚಿತ್ರಗಳು ತಮ್ಮ ಅಸ್ಥಿತ್ವವನ್ನು ಉಳಿಸಿಕೊಂಡಿವೆ. ಇತ್ತೀಚಿನ ದಿನಗಳಲ್ಲಿ ಭಿತ್ತಿ ಚಿತ್ರಗಳು ಉಳಿಯಬೇಕು ಎಂಬ ಅರಿವು ಮೂಡಿರುವುದರಿಂದ ಆ ಜಾಗದ ಹೋಮಕಾರ್ಯ ತಾತ್ಕಾಲಿಕವಾಗಿ ಸ್ಥಗಿತ ಗೊಳಿಸಲಾಗಿದೆ. ಈ ಕಾರಣಕ್ಕೆ ಇಲ್ಲಿಯ ಭಿತ್ತಿ ಚಿತ್ರಗಳು ಇನ್ನು ಸ್ವಲ್ಪ ಕಾಲ ಉಳಿಯಬಹುದು ಎನ್ನುವ ಬರವಸೆ ಮೂಡಿದೆ.

ಸಿರಾದ ಶ್ರೀ ರೇವಣ ಸಿದ್ಧೇಶ್ವರ ದೇವಾಲಯದಲ್ಲಿ ವಿಶೇಷವಾದ ಚಿತ್ರ ಸಮೂಹವನ್ನು ಚಿತ್ರಿಸಲಾಗಿದೆ. ಈಗಿರುವ ಸಿಬಿ, ಕೆರೆಗೋಡಿ ರಂಗಾಪುರಕ್ಕೆ ಹೋಲಿಸಿ ನೋಡಿದಾಗ ಗಾತ್ರದಲ್ಲಿ ವಿಶೇಷ ಒತ್ತು ನೀಡಿ ರಚನೆಯಾದ ಭಿತ್ತಿ ಚಿತ್ರಗಳಾಗಿವೆ. ಗಣೇಶ, ಆಂಜನೇಯ, ಗರುಡ, ಉಗ್ರನರಸಿಂಹ, ವೇಣುಗೋಪಾಲ ಹಾಗೂ ಗೋಪಿಕ ವಸ್ತ್ರಾಪರಹಣ, ಮೈಸೂರು ಅರಸರ ದರ್ಬಾರ್ ದೃಶ್ಯ, ರಾಮ ಪಟ್ಟಾಭಿಷೇಕ ಹಾಗೂ ಕುರುಬರ ಜನಾಂಗದ ಹುಟ್ಟಿನ ಬಗ್ಗೆ ತಿಳಿಸುವ ಚಿತ್ರಗಳು ಸುಮಾರು ೨x೨½ ಅಡಿಗಳ ಅಳತೆಯಲ್ಲಿ ರಚನೆಗೊಂಡ ಚಿತ್ರಗಳನ್ನು ರಚಿಸಲಾಗಿದೆ. ಈ ಚಿತ್ರಗಳು ದೇವಾಲಯದ ಗರ್ಭಗುಡಿಯ ಮುಂದಿನ ಹಜಾರದಲ್ಲಿ ರಚನೆಗೊಂಡಿವೆ. ಈ ಹಜಾರದ ತುಂಬ ಭಿತ್ತಿ ಚಿತ್ರಗಳೆ ತುಂಬಿದ್ದವು ಎಂದು ಅ.ಲ.ನರಸಿಂಹನ್‌ರವರು ಕರ್ನಾಟಕ ಭಿತ್ತಿಚಿತ್ರ ಪರಂಪರೆ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಇದೇ ಅಭಿಪ್ರಾಯ ಕೆಲವು ವಿದ್ವಾಂಸರದಾಗಿದೆ.

ಭಿತ್ತಿ ಚಿತ್ರದ ಕಣಜದಂತಿರುವ ಹಜಾರವನ್ನು ಸುಣ್ಣಹೊಡೆದುಮುಚಿದ್ದರೂ. ಅವುಗಳಲ್ಲಿ ಛಾವಣಿ, ತೊಲೆಗಳು ಹಾಗೂ ಸುತ್ತಲಿನ ಗೋಡೆಗಳ ಮೇಲೆ ಚಿತ್ರಗಳಿದ್ದವೆನ್ನಲಾಗಿದೆ. ಪ್ರಸ್ತುತ ಗರ್ಭಗುಡಿಯ ಒಳಭಾಗದಲ್ಲಿ ಆಂಜನೇಯ ಮತ್ತು ಗೋಪಿಕ ವಸ್ತ್ರಾಪಹರಣ ಈ ಎರಡು ಚಿತ್ರಗಳು ಹಾಗೂ ದೇವಾಲಯದ ಗರ್ಭಗುಡಿಯ ಎಡಭಾಗದಲ್ಲಿ ರಾಮ, ಸೀತೆಯರು, ಗರುಡ, ಚತುರ್ಭುಜ ವೇಣುಗೋಪಾಲ, ಉಗ್ರನರಸಿಂಹ, ಅರಸನಿಂದ ಶೋಭಿಸುತ್ತಿರುವ ದರ್ಬಾರ್ ಹಾಲ್ ಚಿತ್ರಗಳು ಅರ್ಧ ಗೋಡೆಯಲ್ಲಿ ಮಾತ್ರ ಉಳಿದಿವೆ.

ಭಿತ್ತಿ ಚಿತ್ರಗಳು ರಚಿಸಿದ ಗೋಡೆಗಳ ಎತ್ತರ ಸುಮಾರು ಎಂಟು ಅಡಿ, ಅದರಲ್ಲಿ ಕೆಳಗಿನಿಂದ ನಾಲ್ಕು ಅಡಿಗಳಷ್ಟು ಖಾಲಿ ಇದ್ದು ಉಳಿದ ಗೋಡೆಯು ಚಿತ್ರಾಲಂಕಾರದಿಂದ ಕೂಡಿದೆ. ಉಳಿದ

ಗೋಡೆಗಳಲ್ಲಿ, ಗಣಪತಿ, ಸೀತಾ ಕಲ್ಯಾಣ, ಅಹಲ್ಯೋದ್ಧಾರ, ಅಷ್ಟದಿಕ್ಪಾಲಕರು, ವೆಂಕಟೇಶ್ವರ, ಪೂಜಾರಿ, ಮಂಗಳ ದ್ರವ್ಯಹಿಡಿದ ಸುಂದರಾಂಗಿಯರು, ಚಾಮರ ಧಾರಿಣಿಯರು, ರಾಮ ರಾವಣರ ಯುದ್ಧ, ಶ್ರೀ ರಾಮಪಟ್ಟಾಭಿಷೇಕ ಮುಂತಾದ ಚಿತ್ರಗಳು ಛಾವಣಿ ಕಂಬ ಹಾಗೂ ತೊಲೆಗಳು ಸೇರಿದಂತೆ ಇದ್ದವು ಅವುಗಳಿಗೆ ಸುಣ್ಣ ಹೊಡೆದು ಹಾಳುಮಾಡಲಾಗಿದೆ ಎಂದು ಎಸ್.ವೆಂಕಟೇಶ್ ಕಲ್ಪಸಿರಿ ಸ್ಮರಣ ಸಂಚಿಕೆಯಲ್ಲಿ ತಿಳಿಸಿದ್ದಾರೆ.

ಮೈಸೂರು ಅರಸರ ದರ್ಬಾರ್ ಹಾಗೂ ಅಲಂಕಾರಗೊಂಡ ಕುದುರೆ ಏರಿದ ಗಿರಿಜಾ ಮೀಸೆಯ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ಚಾಮರಹಿಡಿದ ಸೇವಕ ಚಿತ್ರವಿರುವ ಜಾಗದಲ್ಲಿ ವಿದ್ಯುತ್ ಮೀಟರ್ ಬೋರ್ಡನ್ನು ಅಳವಡಿಸಿದ್ದರಿಂದ ಮೇಲಿನ ಎರಡೂ ಚಿತ್ರಗಳು ಹಾಳಾಗಿವೆ. ಅಲ್ಲಲ್ಲಿ ಅಲ್ಪಸ್ವಲ್ಪ ಕಾಣುತ್ತಿವೆ.

ಈ ಹಿಂದೆ ತಿಳಿಸಿದ ಹಾಗೆ ಇಡೀ ಭಿತ್ತಿ ಚಿತ್ರದ ಮೇಲೆ ಸುಣ್ಣ ಹೊಡೆಯುವುದರ ಮೂಲಕ ದೇವಾಲಯವನ್ನು ಸ್ವಚ್ಛಗೊಳಿಸಿದೆವು ಅಥವಾ ಅಲಂಕರಿಸಿದೆವು ಎನ್ನುವ ಭ್ರಾಂತಿಯಿಂದ ಅಮೂಲ್ಯ ಚಿತ್ರ ಬಂಡಾರವನ್ನು ಹಾಳುಮಾಡಿದ ದೇವಾಲಯದ ಕಾರ್ಯಾಲಕ್ಕೆ ಈಗ ಅರಿವಾಗಿರಬೇಕು, ಸ್ವಲ್ಪಮಟ್ಟಿಗೆ ಈ ರೀತಿಯ ಅವಗಡಗಳು ನಡೆಯದಂತೆ ಎಚ್ಚರಿಕೆವಹಿಸಿದಂತೆ ಕಾಣುತ್ತದೆ. ಆದರೂ ಸುಣ್ಣ ಹೊಡೆಯುವ ಕೂಲೀಕಾರರು ನಿರ್ಲಕ್ಷ್ಯ ತೋರುವುದನ್ನು ಬಿಟ್ಟಿಲ್ಲ, ಅಲ್ಲಲ್ಲಿ ಭಿತ್ತಿ ಚಿತ್ರದ ಮೇಲೆ ಸುಣ್ಣವನ್ನು ಸಿಡಿಸಿ ಭಿತ್ತಿ ಚಿತ್ರದ ಅಂದಕ್ಕೆ ಭಂಗತಂದಿದ್ದಾರೆ. ಉಳಿದಿರುವ ಭಿತ್ತಿ ಚಿತ್ರದಲ್ಲಿ ರಾಮಸೀತೆಯ ಚಿತ್ರವು ಶೇ. ೮೦ರಷ್ಟು ಹಾಳಾಗಿದೆ ಉಳಿದ ಚಿತ್ರಗಳು ನೋಡಲು ಗುರುತಿಸಲು ಸಾಧ್ಯವಾಗುವ ಮಟ್ಟದಲ್ಲಿವೆ.

ರಾಮ ಸೀತೆಯ ಚಿತ್ರವಿರುವ ಜಾಗದಲ್ಲಿ ಉತ್ಸವ ಮೂರ್ತಿಯನ್ನು ಇಟ್ಟಿರುವುದರಿಂದ ತೆಗೆಯುವಾಗ ಮತ್ತು ಇಡುವಾಗ ಗೋಡೆಗೆ ತಗುಲಿ ಹೆಚ್ಚು ಹಾಳಾಗಿ ಗೋಡೆಯ ಸುತ್ತಲು ಸುಮಾರು ನಾಲ್ಕು ದೀಪದ ಗೂಡುಗಳಿದ್ದು ಅವುಗಳಿಗೂ ಕೂಡ ಅರಮನೆಯಂತೆ ಅಲಂಕಾರ ಮಾಡಿದೆ. ಆ ಗೂಡುಗಳಲ್ಲಿ ದೀಪವನ್ನಿಟ್ಟು ಗೂಡಿನ ಸುತ್ತಲೂ ಕಪ್ಪು ಕಾಡಿಗೆ ಆವರಿಸಿ ಸುತ್ತಮುತ್ತಲಿನ ಅಲಂಕಾರವನ್ನು ಹಾಳುಮಾಡಿದೆ. ಗರ್ಭಗುಡಿಯ ಬಲಭಾಗದ ಗೂಡೊಂದರ ಮೇಲೆ ಸಾಲಾಗಿ ದಶಾವತಾರದ ಚಿತ್ರಗಳಿದ್ದು ಈ ದೀಪದ ಹೊಗೆಯಿಂದ ಸಂಪೂರ್ಣ ಕಪ್ಪು ಬಣ್ಣಕ್ಕೆ ತಿರುಗಿವೆ.

ಈ ದೇವಾಲಯದ ಕಾರ್ಯಕಾರಿಣಿ ಸಮಿತಿಗೆ ಭಿತ್ತಿ ಚಿತ್ರಗಳ ಅವನತಿಯನ್ನು ತಡೆಯುವಂತೆ ಮಾರ್ಗದರ್ಶನ ನೀಡಲಾಗಿದ್ದು, ಈಗಾಗಲೇ ತೆಗೆದುಕೊಂಡಿರುವ ಕ್ರಮವು ಅಷ್ಟೊಂದು ಸುಧಾರಿಕೆಯಾಗಿಲ್ಲದಿದ್ದರಿಂದ ಭಿತ್ತಿ ಚಿತ್ರಗಳಿಗೆ ಇನ್ನಷ್ಟು ಪ್ರಾಮುಖ್ಯತೆ ಕೊಟ್ಟು ಕಾಪಾಡಿದರೆ ಅಮೂಲ್ಯ ಚಿತ್ರಸಂಪತ್ತನ್ನು ಉಳಿಸಿದಂತಾಗುತ್ತದೆ.

ಅಮೃತೂರಿನ ಲಕ್ಷ್ಮಿಪಟಾಲದಮ್ಮ ದೇವಾಲಯದಲ್ಲಿ ರಚಿಸಿರುವ ಭಿತ್ತಿ ಚಿತ್ರಗಳು ಮೈಸೂರು ಸಾಂಪ್ರದಾಯಿಕ ಶೈಲಿಯಲ್ಲಿದ್ದು, ಈ ಚಿತ್ರಗಳು ದೇವಾಲಯದ ವಿಶಾಲವಾದ ಮಧ್ಯ ಅಂಕಣದ ಗೋಡೆ

ಹಾಗೂ ತಲೆಯ ಮೇಲೆ ರಚನೆಗೊಂಡಿವೆ. ಮುಖ್ಯದ್ವಾರದ ಎದುರು ಗ್ರಾಮದೇವತೆಗಳ ಮೂರ್ತಿಗಳಿದ್ದು ಅವುಗಳ ಹಿಂಭಾಗದಲ್ಲಿ ತೊಲೆಯಲ್ಲಿ ಭಿತ್ತಿ ಚಿತ್ರಗಳು ಇರುವ ಕುರುಹು ಸಿಗುತ್ತದೆ. ಅಲ್ಲದೆ ಆ ತೊಲೆಯ ಉದ್ದಕ್ಕೂ ಬಲಗಡೆಯಿಂದ ಮೆರವಣಿಗೆ ಕುಣಿತ, ವಾದ್ಯಗಾರರು, ನರ್ತಕಿಯರು, ನಾಗರೀಕರು ಉತ್ತಮ ಪೋಷಾಕುಗಳನ್ನು ಧರಿಸಿ ಫಲಪುಷ್ಪಗಳನ್ನು ಹಿಡಿದು ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದು ಅಲ್ಲಲ್ಲಿ ಕಂಡು ಬರುತ್ತದೆ. ಉಳಿದಂತೆ ಸ್ವಲ್ಪ ದೂರ ಸುಣ್ಣ ಬಣ್ಣದಿಂದ ಮುಚ್ಚಿಹೋಗಿದೆ. ಮುಂದುವರೆದಂತೆ ವಿಷ್ಣುವಿನ ದಶಾವತಾರದ ಚಿತ್ರಗಳನ್ನು ಚಿತ್ರಿಸಲಾಗಿದೆ.

ದೊಡ್ಡಗಾತ್ರದಲ್ಲಿ ಶಿವಲೀಲೆಯ ಪ್ರಸಂಗ ಮುಂತಾದ ಚಿತ್ರಗಳು ಸಿ.ವೆಂಕಟೇಶ್‌ರವರ ಸಮೀಕ್ಷೆಯ ಸಂದರ್ಭದಲ್ಲಿ ಇದ್ದಿವೆ ಆದರೆ ಪ್ರಸ್ತುತ ಅವುಗಳು ಸುಣ್ಣದಿಂದ ಮುಚ್ಚಿ ಹೋಗಿವೆ. ಈ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪುರೋಹಿತರ ಸಹಾಯದಿಂದ ನೀರಿನಿಂದ ತೊಳೆದು ೨½ x೩ ಅಡಿ ಅಳತೆಯ ತುಂಬುರನ ಚಿತ್ರವು ಬೆಳಕಿಗೆ ಬಂತು, ತೊಲೆಯಲ್ಲಿರುವ ಚಿತ್ರವನ್ನು ತೆಗೆಯಲು ಹೋದಾಗ ಅಕ್ಕಳಿಕೆ ಸಮೇತ ಹೊರ ಬಂದವು ಆ ಕಾರ್ಯವನ್ನು ಅಷ್ಟಕ್ಕೆ ನಿಲ್ಲಿಸಬೇಕಾಯಿತು. ಈ ದೇವಾಲಯದಲ್ಲಿ ಭಿತ್ತಿ ಚಿತ್ರವಿರುವುದು ಪೂಜೆ ಮಾಡುವ ಅರ್ಚಕರಿಗೇ ಗೊತ್ತಿಲ್ಲ ಅಷ್ಟರಮಟ್ಟಿಗೆ ಸುಣ್ಣ ಹೊಡೆದುಕೊಂಡು ಬಂದಿದ್ದಾರೆ.

ಸುಮಾರು ವರ್ಷಗಳಿಂದಲೂ ಗ್ರಾಮದೇವತೆಯ ಮುಖ ಬಣ್ಣ ಮಾಡುವಾಗ ಇಲ್ಲಿರುವ ಭಿತ್ತಿ ಚಿತ್ರಗಳಿಗೂ ಆಯಿಲ್ ಕಲರ್ ಟಚ್‌ಮಾಡಿದ ಕಲಾವಿದರು ನುರಿತವರಲ್ಲದಿದ್ದರೂ ಹಿಂದಿನ ಮಾದರಿಯನ್ನೇ ಅನುಸರಿಸಲು ಪ್ರಯತ್ನಿಸಿದ್ದಾರೆ. ಆದರೂ ಮೂಲ ಸ್ವರೂಪ ಕಳೆದುಕೊಂಡು ಈಗಿರುವ ಸ್ವರೂಪವು ಸುಣ್ಣದಲ್ಲಿ ಬೆರೆತು ಹೋಗಿದೆ.

ಹೆಬ್ಬೂರಿನ ಚತುರ್ಭುಜ ವೇಣುಗೋಪಾಲ ದೇವಾಲಯವು ಈ ಊರಿನ ೧೦೧ ದೇವಾಲಯದಲ್ಲಿ ಒಂದು. ಈ ದೇವಾಲಯದ ಸುತ್ತಲೂ ನಾಲ್ಕೈದು ದೇವಾಲಗಳಿದ್ದು ಮುಂದೆ ಕೆರೆಯ ಏರಿಯನ್ನು ಹೊಂದಿದೆ. ಈ ದೇವಾಲಯದ ಗರ್ಭಗುಡಿಯ ಮುಂದಿನ ಹಜಾರದಲ್ಲಿ ಶ್ರೀರಾಮ, ಜಯ ವಿಜಯ ದ್ವಾರಪಾಲಕರು,ಶಂಕ ಚಕ್ರಗಳ ನಡುವೆ ಗಣೇಶ, ವಿಷ್ಣು ಮತ್ತು ಲಕ್ಷ್ಮಿ ಹಾಗೂ ಗರ್ಭಗುಡಿಯ ಬಗಲ ಸುತ್ತಲೂ ಹೂ ಬಳ್ಳಿ ನಕ್ಷೆಗಳಿಂದ ಕೂಡಿದೆ. ಇವಿಷ್ಟು ಇಲ್ಲಿ ಅಲ್ಪಸ್ವಲ್ಪ ಹುಳಿದಿರುವ ರೇಖೆಗಳು. ರೇಖೆಗಳೆಂದರೆ ರೇಖಾ ಚಿತ್ರವೆಂದು ಭಾವಿಸಬಾರದು. ಬಣ್ಣ ಕಳೆದುಕೊಂಡ ಬರೀ ರೇಖೇಗಳು ಮಾತ್ರ ಉಳಿದಿವೆ. ಇಲ್ಲಿನ ಚಿತ್ರಗಳು ಶೇ ೬೦ರಷ್ಟು ಹಾಳಾಗಿದ್ದು ಅಲ್ಲಲ್ಲಿ ರೇಖೆಗಳು ಮಾತ್ರ ಕಾಣುತ್ತವೆ. ರೇಖೆಗಳು ಉತ್ತಮ ಕಲಾವಿದನಿಂದ ಹಾಕಲ್ಪಟ್ಟಿವೆ ಎಂಬುದು ದೃಢವಾಗುತ್ತವೆ. ಉತ್ತಮ ಸಂಯೋಜನೆ ಹೊಂದಿದ ಚಿತ್ರಗಳಾಗಿರಬೇಕು.

ಬಿಲ್ಲುಹಿಡಿದ ರಾಮನ ಚಿತ್ರವು ೨½ x೩ ಅಡಿ ಅಳತೆಯ ದೊಡ್ಡ ಚಿತ್ರವಾಗಿದೆ. ಈ ರೀತಿ ದೊಡ್ಡ ಗಾತ್ರದ ಚಿತ್ರವೆಂದರೆ ಸಿರಾ ರೇವಣಸಿದ್ದೇಶ್ವರ ದೇವಾಲಯದ ಚಿತ್ರಗಳ ಸಾಲಿಗೆ ನಿಲ್ಲುತ್ತದೆ.

ಆದರೆ ಹಿನ್ನೆಲೆ ಮುನ್ನೆಲೆಗಳ ಬಣ್ಣಗಳು ಸ್ವಲ್ಪವೂ ಉಳಿದಿಲ್ಲ ಸಂಪೂರ್ಣ ಅವಸಾನದ ಚಿತ್ರಗಳು ಎಂದೆನಿಸಿವೆ. ದುರಾದೃಷ್ಟವೆಂದರೆ, ಇಲ್ಲಿನ ನಾಗರೀಕರಿಗೆ ವೇಣುಗೋಪಾಲದೇವಾಲಯದ ವಿಳಾಸ ಕೇಳಿದರೆ ಬಹುತೇಕ ಮಂದಿ ಅರಿವಿಲ್ಲದೆ ಉತ್ತರ ನೀಡಿದರು. ಆ ಸ್ಥಿತಿಗೆ ಈ ದೇವಾಲಯವು ತಲುಪಿದೆ ಎಂದರೆ ಅದರಲ್ಲಿರುವ ಚಿತ್ರದ ಗತಿ ಏನಾಗಿರಬೇಕು ಎಂದು ಒಂದು ಕ್ಷಣ ಊಹಿಸಿಕೊಳ್ಳಿ, ಇದಕ್ಕೆ ಕಾರಣ ಇಲ್ಲಿ ನಾಗರೀಕರು ದೇವಾಲಯ ಹಳೆಯದಾದಂತೆ ನಿರ್ಲಕ್ಷಿಸಿ ಮತ್ತೊಂದು ಹೊಸದೇವಾಲಯವನ್ನು ನಿರ್ಮಿಸುವತ್ತ ಯೋಚನೆ ಹರಿಸುತ್ತಾರೆ.

ಪ್ರಾಚೀನ ಕಾಲದಿಂದಲೂ ದೇವಾಲಯಕ್ಕೆ ಭಕ್ತಿಯ ಮಡಿಮೈಲಿಗೆಯನ್ನು ಅನುಸರಿಸಿಸುತ್ತಾರೆ ಸ್ವಲ್ಪ ಹಳೆದಾದರೆ ಅಥವಾ ಹಳೆದೆನಿಸಿದರೆ ಅದರತ್ತ ತಿರುಗಿಯೂ ನೋಡುವುದಿಲ್ಲ ನಮ್ಮ ಬುದ್ಧಿವಂತ ನಾಗರಿಕರು. ದೇವಾಲಯವು ಮಳೆಯಿಂದ ಸೋರಿ ಚಿತ್ರದ ಮೇಲೆ ನೀರು ಹರಿದು ಚಿತ್ರಗಳು ಹಾಳಾಗಿವೆ ಕಿಡಿಗೇಡಿಗಳು ಅದರ ಮೇಲೆ ತಮ್ಮ ಚಿತ್ತಾರವನ್ನು ಮಸಿಕಡ್ಡಿಯಿಂದ ಮೂಡಿಸಿ ಮತ್ತಷ್ಟು ಹಾಳುಗೆಡವಿದ್ದಾರೆ.

ಬೆನಕನಕೆರೆಯ ಶ್ರೀ ಚೆನ್ನಕೇಶವ ದೇವಾಲಯವು ಸುಂದರ ಚನ್ನಕೇಶವನ ವಿಗ್ರಹವನ್ನು ಹೊಂದಿದೆ. ಈ ದೇವಾಲಯವು ಒಂದು ಸಣ್ಣ ಗುಡ್ಡದ ಮೇಲೆ ಕಟ್ಟಲ್ಪಟ್ಟಿದು ಎರಡು ಜಗಲಿ ವಿಶಾಲವಾದ ಹಜಾರ ಮತ್ತು ಗರ್ಭ ಗುಡಿಯನ್ನು ಹೊಂದಿದೆ. ವಿಶಾಲವಾದ ಹಾಜಾರದ ಭಿತ್ತಿಗಳಲ್ಲಿ ಸರಸ್ವತಿ, ಅಂಜನೇಯ, ಗರುಡ, ಶಿವ ಪಾರ್ವತಿಯರು, ವಿಷ್ಣು, ಗಜಲಕ್ಷ್ಮಿಯರು, ಹಾಗೂ ಗರ್ಭಗೃಹ ದ್ವಾರದ ಇಕ್ಕೆಲುಗಳಲ್ಲಿ ದ್ವಾರಪಾಲಕರನ್ನು ಚಿತ್ರಿಸಿದೆ. ಗೋಡೆಯ ಸುತ್ತಲಿನ ತೊಲೆಯ ಮೇಲೆ ರಾಮಾಯಣದ ಬಹುತೇಕ ಜನ ಪರಿಚಿತ ಚಿತ್ರಗಳಾದ ದಶಾವಾತಾರ, ರಾಮ, ಲಕ್ಷ್ಮಣ, ಸೀತೆ, ಹನುಮಂತ, ರಾಮರಾವಣಯುದ್ಧ, ಮಾರೀಚ, ಮಾರುವೇಷ ದಾರಿ ರಾವಣ, ಕುಂಭಕರ್ಣ, ಅಶೋಕವನ, ರಾವಣನ ರಾಜ್ಯ ಲಂಕೆ, ಲಂಕಾದಹನ, ಮುಂತಾದ ಹತ್ತು ಹಲವಾರು ಚಿತ್ರಗಳನ್ನ ಜನಪದ ಶೈಲಿಯಲ್ಲಿ ಸ್ಥಳೀಯ ಎಂ.ಎಲ್.ಸಿ, ಲಿಂಗಾಚಾರ್ಯ ಎನ್ನುವ ಕಲಾವಿದನು ಪೂರ್ವಜರ ಅನುಕ್ರಮದಂತೆ ಕಲಿತ ಕಲೆಯನ್ನು ಈ ದೇವಾಲಯದಲ್ಲಿ ಬಿಡಿಸಿದ್ದಾನೆ.

ಕೆರೆಗೊಡಿ ರಂಗಾಪುರದ ಚಿತ್ರಗಳು ಜನಪದ ಶೈಲಿಗೆ ಹಿಡಿದ ಕನ್ನಡಿಯಂತಿವೆ. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಮೇಲೆ ಸೂಚಿಸಿರುವ ಹಲವಾರು ಕಲಾಕೃತಿಗಳು ಹಾಳಾಗಿದ್ದು ಅವುಗಳ ಅಲ್ಪಸ್ವಲ್ಪ ರೇಖೆಗಳು ಉಳಿದುಕೊಂಡಿವೆ. ಎಸ್.ವೆಂಕಟೇಶ್ ಅವರು ತಮ್ಮ ಒಂದು ಲೇಖನದಲ್ಲಿ ಚಿತ್ರಗಳ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಆದರೆ ಈಗ ಅವುಗಳು ಯಾವುದು ಸ್ಪಷ್ಟವಾಗಿ ಗೋಚರಿಸುತ್ತಿಲ್ಲ, ಈ ಭಿತ್ತಿ ಚಿತ್ರಗಳು ಅಷ್ಟೇನು ಹಳದಾಗಿರದಿದ್ದರೂ ಭಿತ್ತಿ ಚಿತ್ರದ ವಿಧಿವಿಧಾನಗಳನ್ನು ಅನುಸರಿಸಿ ರಚನೆಗೊಂಡಿಲ್ಲದಿದ್ದುದರಿಂದ ಕೇವಲ ಐವತ್ತು ವರ್ಷಗಳ ಅವಧಿ ಮಾತ್ರ ಅವುಗಳ ಉಳಿವು ಎನಿಸುತ್ತದೆ.

ಭಿತ್ತಿ ಚಿತ್ರಗಳು ಶಾಸ್ತ್ರ ಆಗಮಗಳ ಆಧಾರದ ಮೇಲೆ ರಚನೆಗೊಂಡಿಲ್ಲವಾದ್ದರಿಂದ ಚಿತ್ರಗಳಲ್ಲಿ ಕ್ರಮಬದ್ಧತೆ ಉತ್ತಮ ಸಂಯೋಜನೆ ಹಾಗೂ ರೇಖೆಗಳನ್ನು ಕಾಣಲು ಸಾಧ್ಯವಿಲ್ಲ. ಈ ದೇವಾಲಯವು

ತುಂಬಾ ಹಳೆದಾದುದರಿಂದ ಹಾಗೂ ಉತ್ತಮ ನಿರ್ವಹಣೆ ಇಲ್ಲದಿರುವುದರಿಂದ ಪ್ರಕೃತಿಯು ತನ್ನತ್ತ ಸೆಳೆದುಕೊಳ್ಳುವ ಪ್ರಯತ್ನವನ್ನು ದಿನೇ ದಿನೇ ಹೆಚ್ಚಿಸುತ್ತಿದೆ. ಇಲ್ಲಿಯೂ ಸಹ ನಾಗರೀಕರ ನಿರ್ಲಕ್ಷ್ಯವೇ ಮೂಲ ಕಾರಣವಾಗಿದೆ. ಹಳೆ ದೇವಾಲಯವನ್ನು ಕಡೆಗಣಿಸಿ ಸರ್ಕಾರದಿಂದ ಕೊಡುವ ಸಹಾಯಧನ ಹಾಗೂ ಭಕ್ತಾದಿಗಳಿಂದ ಬರುವ ದೇಣಿಗೆಯಿಂದ ಹೊಸ ಹೊಸ ಕಟ್ಟಡ ವಾಸ್ತು ಶಿಲ್ಪಗಳತ್ತ ಮನಸ್ಸು ಹರಿಸಿದ್ದಾರೆ. ಹಾಗಾಗಿ ಈ ದೇವಾಲಯದ ಚಿತ್ರಗಳು ಮುಂದಿನ ಜನಾಂಗಕ್ಕೆ ದೊರೆಯಲಾರವು.

ಚಿಕ್ಕನಾಯಕನ ಹಳ್ಳಿ ತಾಲ್ಲೂಕಿನ ಯಳನಡು ಸಿದ್ಧರಾಮೇಶ್ವರರ ನೆಲೆಬೀಡು ಈ ದೇವಾಲಯ ೧೪-೧೫ ನೇ ಶತಮಾನದಲ್ಲಿ ವಿಜಯನಗರದ ಕಾಲದಲ್ಲಿ ನಿರ್ಮಿಸಿದ ದೇವಾಲಯವಾಗಿದೆ. ಈ ದೇವಾಲಯವು ಶ್ರೀ ಸಿದ್ಧರಾಮೇಶ್ವರ ಎಂಬ ಪವಾಡ ಪುರುಷರ ಗದ್ದುಗೆಯಾಗಿದೆ.

ಈ ದೇವಾಲಯದ ಮುಖ ಮಂಟಪದಲ್ಲಿ ಸಿದ್ಧರಾಮೇಶ್ವರರ ಪವಾಡ ಲೀಲೆಗಳನ್ನು ಕುರಿತಾದ ಭಿತ್ತಿ ಚಿತ್ರಗಳು ಇದ್ದವೆಂದು ಡಾ.ಅ.ಲ.ನರಸಿಂಹನ್‌ರವರು ಪ್ರಸ್ತಾಪಿಸಿದ್ದಾರೆ.

ಪ್ರಸ್ತುತ ಯಾವುದೇ ಚಿತ್ರವಿದ್ದ ಕುರುಹುಗಳು ಈಗ ಕಂಡುಬರುವುದಿಲ್ಲ ಅಲ್ಲದೆ ಬೇರಾವ ಲೇಖನದಲ್ಲೂ ಇಲ್ಲಿಯ ಚಿತ್ರಗಳ ಬಗ್ಗೆ ಮಾಹಿತಿ ದೊರಕುವುದಿಲ್ಲ. ಈತಗಿರುವ ಪುರೋಹಿತರು ಹಾಗೂ ದೇವಾಲಯದ ಛೇರ್ಮನ್‌ರನ್ನು ಸಂದರ್ಶಿಸಿದಾಗ ನಮಗೆ ತಿಳಿದ ಮಟ್ಟಿಗೆ ಯಾವುದೇ ಚಿತ್ರಗಳು ಕಂಡು ಬಂದಿಲ್ಲ, ಅದಕ್ಕೂ ಹಿಂದೆ ಇದ್ದಿರಬಹುದು ಎನ್ನುವುದು ಅವರ ಉತ್ತರವಾಗಿತ್ತು. ಈ ದೇವಾಲಯದ ಸುತ್ತ ಮುತ್ತಲೂ ಹಲವಾರು ವೀರಗಲ್ಲು ಮಾಸ್ತಿಗಲ್ಲುಗಳಿದ್ದುದು ಕಂಡುಬರುತ್ತದೆ. ಇದೊಂದು ಐತಿಹಾಸಿಕ ಸ್ಥಳವೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ಈ ಸ್ಥಳವು ಪವಾಡ ಪುರುಷರ ಮಹಿಮೆಯಿಂದ ಇಂದಿಗೂ ಮಹಿಮಾಪೂರ್ಣವಾಗಿ ನಡೆಯುತ್ತಿದೆ. ಈ ಹಿನ್ನೆಲೆಯಲ್ಲಿ ವಿಜಯನಗರದ ಅರಸರು ಇಲ್ಲಿ ಚಿತ್ರ ಬರೆಸಿರಬಹುದು ಎಂಬುದು ಯಡೆಯೂರು ಸಿದ್ಧಲಿಂಗ, ಗುಬ್ಬಿ ಚನ್ನಬಸವೇಶ್ವರ, ಹಾಗೂ ಚಿತ್ರಮಠಗಳಂತಹ ಚಿತ್ರ ಶಾಲೆಯೋಪಾದಿಯ ಚಿತ್ರ ದಿನಚರಿಯು ಜಿಲ್ಲೆಯಲ್ಲಿದ್ದುದರಿಂದ ಯಳನಡು ಗಂಗರ ಕಾಲದಿಂದ ಒಂದಲ್ಲಾ ಒಂದು ರೀತಿಯಲ್ಲಿ ಆಡಳಿತಕ್ಕೆ ಒಳಪಟ್ಟ ಸ್ಥಳವಾಗಿದೆ. ಈ ಎಲ್ಲಾ ಮಾಹಿತಿಯು ಚಿತ್ರಗಳು ಇದ್ದವು ಎಂಬ ಮಾತಿಗೆ ಪೂರಕವಾಗಿವೆ.

ಯಡೆಯೂರು ಶ್ರೀಕ್ಷೇತ್ರವು ಒಂದು ಧಾರ್ಮಿಕ ಪುಣ್ಯಕ್ಷೇತ್ರ ಸಿದ್ಧಲಿಂಗೇಶ್ವರ ಎಂಬ ಯತಿಗಳು ತಪಸ್ಸುಗೈದ ತಪೋಭೂಮಿ. ಕ್ಷೇತ್ರವು ಶೈವ ಧರ್ಮಿಗಳ ನೆಲೆಯಾಗಿದ್ದು, ಈ ದೇವಾಲಯ ವಿಶಾಲವಾದ ಹಜಾರ ಮಂಟಪದ ಛಾವಣಿಯಲ್ಲಿ ನೂರಾರು ಶೈವ ಮತ್ತು ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಭಿತ್ತಿ ಚಿತ್ರಗಳಿದ್ದವು. ಅವುಗಳು ಹಳೆಯದಾಯಿತು ಎಂಬ ಕಾರಣಕ್ಕೆ ಅವುಗಳ ಮೇಲೆ ಮರು ಟಚ್ ಮಾಡಲಾಯಿತು. ಸಾಂಪ್ರದಾಯಿಕ ಭಿತ್ತಿ ಚಿತ್ರವು ಹೋಗಿ ಡ್ರಾಮಾ ಸೀನ್ ಕಮರ್ಷಿಯಲ್ ಚಿತ್ರಗಳಂತೆ ಚಿತ್ರಿತವಾಗಿದ್ದವು ನಂತರ ದೇವಾಲಯದ ಜೀರ್ಣೋದ್ಧಾರದ ಸಂದರ್ಭದಲ್ಲಿ ಅಂದಿನ ಘನಸರ್ಕಾರದ

ಧನಸಹಾಯದ ಪರಿಣಾಮ ಇದ್ದ ಚಿತ್ರಗಳು ಗಾರ ಶಿಲ್ಪಗಳು ಮಣ್ಣು ಪಾಲಾಗುತ್ತವೆ. ಈಗಾಗಲೇ ಭಿತ್ತಿ ಚಿತ್ರಗಳು ಹಾಳಾಗಿವೆ. ದೇವಾಲಯದ ಗರ್ಭಗುಡಿಯ ಮೇಲೆ ಸಿದ್ಧಾರೂಢರು ಶೇಷ-ಶಯನಾವಸ್ಥೆಯಲ್ಲಿರುವ ಒಂದೇ ಒಂದು ಚಿತ್ರವು ಉಳಿದೆ.

ಈ ಮಾದರಿಯ ಭಿತ್ತಿ ಚಿತ್ರಗಳು ಇದ್ದವೆಂದು ಅಲ್ಲಿಯ ಅರ್ಚಕರು ಹಾಗೂ ವ್ಯವಸ್ಥಾಪಕರು ತಿಳಿಸಿದರು. ದೇವಾಲಯದ ಆವರಣದಲ್ಲಿ ಸಿದ್ಧಲಿಂಗಯತಿಗಳು ತಪಸ್ಸಿನಲ್ಲಿರುವುದು ಸ್ತ್ರೀ ಪುರುಷರಿಬ್ಬರು ಭಕ್ತಿಯಿಂದ ಎರಡೂ ಕೈ ಮುಗಿದು ಆಶೀರ್ವಾದ ಬೇಡುತ್ತಿರುವ ದೃಶ್ಯವು ಪೇಪರ್ ಮದ ಮಾಧ್ಯದ ಮೇಲೆ ರಚನೆಗೊಂಡ ಮೈಸೂರು ಸಂಪ್ರದಾಯಿಕ ಚಿತ್ರವಾಗಿದ್ದು, ಈ ಚಿತ್ರವನ್ನು ಮೈಸೂರಿನ ಕಲಾವಿದರಿಂದ ರಚಿಸಿ ದೇವಾಲಯಕ್ಕೆ ದಾನವಾಗಿ ನೀಡಲಾಗಿದೆ. ಈ ಚಿತ್ರವು ೨x೩ ಅಡಿ ಅಳತೆಯದ್ದಾಗಿದೆ. ಈ ಎರಡು ಚಿತ್ರಗಳನ್ನು ಬಿಟ್ಟರೆ ಮತ್ತಾವ ಚಿತ್ರಗಳು ಸಿಗುವುದಿಲ್ಲ.

ಮಿಂಚುಕಲ್ಲು ಗೊಲ್ಲಹಳ್ಳಿಯ ಮಧುಗಿರಿ ಮಾರ್ಗದಲ್ಲಿದೆ. ಇಲ್ಲಿಯ ಆಂಜನೇಯ ದೇವಾಲಯದಲ್ಲಿ ಒಂದೆರಡು ದಶಕಗಳ ಹಿಂದೆ ಭಿತ್ತಿ ಚಿತ್ರಗಳಿದುದರ ವಿವರಣೆ ಹತ್ತಿರದಿಂದ ನೋಡಿದವರು ನೀಡುತ್ತಾರೆ. ಡಾ.ಅ.ಲ.ನರಸಿಂಹನ್‌ರವರು ೧೯೮೫-೮೬ರಲ್ಲಿ ಪರಿವೀಕ್ಷಣೆ ಕೈಗೊಂಡಾಗ ಸುಣ್ಣದಿಂದ ಮುಚ್ಚಿಹೋಗಿದ್ದ ಚಿತ್ರಗಳನ್ನು ನೀರಿನಿಂದ ತೊಳೆದು ಚಿತ್ರಗಳು ಕಾಣುವಂತೆ ಮಾಡಿದ್ದರು. ಸುಮಾರು ಮೂರು ಅಡಿ ಉದ್ದ ನಾಲ್ಕು ಅಡಿ ಅಗಲದ ದಶಾವತಾರಗಳಿಗೆ ಸಂಬಂಧಿಸಿದ ಕೆಲವು ಚಿತ್ರಗಳು ಕಂಡುಬಂತು. ದಶಾವತಾರದಲ್ಲಿ ಬುದ್ಧನ ಚಿತ್ರವಿರುವುದು ಇಲ್ಲಿನ ವಿಶೇಷ ಜೊತೆಗೆ ರಾಮಾಯಣ ಮತ್ತು ಮಹಾಭಾರತದ ಕೆಲವೊಂದು ದೃಶ್ಯಗಳೂ ಇದ್ದವು, (ಎಸ್.ವೆಂಕಟೇಶ್, ಕಲ್ಪಸಿರಿ, ೨೦೦೨), ಆದರೆ ಇಂದು ಅವುಗಳ ಮೇಲೆ ಮತ್ತೆ ಸುಣ್ಣ ಹೊಡೆಯಲಾಗಿದೆ.

ಅಲ್ಲದೆ ಗುಬ್ಬಿಯ ತುಳಸೀಕಟ್ಟೆ, ಸಿರಾಬಳಿಯ ಬಂಕಾಪುರ, ಮಧುಗಿರಿ ಸಮೀಪದ ತುಂಗವಡಿ,ಸಿರಾ ಮರಡಿ ರಂಗನಾಥ ದೇವಾಲಯಗಳಲ್ಲಿ ಭಿತ್ತಿ ಚಿತ್ರಗಳು ಇದ್ದುದರ ವಿವರಣೆಯನ್ನು ಎಸ್.ವೆಂಕಟೇಶ್ ಪ್ರಸ್ತಾಪಿಸುತ್ತಾರೆ. ಆದರೆ ಇಂದು ಯಾವುದೇ ಚಿತ್ರದ ಮಾಹಿತಿಯು ದೊಯುವುದಿಲ್ಲ. ದೇವಾಲಯದ ಜೀರ್ಣೋದ್ಧಾರ, ದಾನಿಗಳ ಕೊಡುಗೆಯ ಮೊಸಾಕ್ ಮಾರಿ, ಪ್ರತೀವರ್ಷ ಹೊಡೆಯುವ ಸುಣ್ಣ ಬಣ್ಣ, ಭಗ್ನ ಪ್ರೇಮಿಗಳು ಭಗ್ನ ಕಲಾವಿದರು, ಜೊತೆಗೆ ಯಾರಿಂದಲೂ ತಡೆಯಲಾದ ಪ್ರಕೃತಿ ವಿಕೋಪ, ಕೆಲವು ರಸಾಯಿನಿಕ ದೋಷ.

**ಸಂರಕ್ಷಣೆ**

ಪ್ರತಿಯೊಂದು ವಸ್ತುವಿಗೂ ಆದಿ ಅಂತ್ಯ ಎಂಬುದು ಖಚಿತ. ಗಿಡಮರ, ಪ್ರಾಣಿಪಕ್ಷಿ, ಮನುಷ್ಯ ವನ್ಯ ಸಂಕುಲ, ಸಕಲ ಚರಾಚರ ಜೀವಿಗೂ ಹಾಗೂ ಮಾನವ ನಿರ್ಮಿತ ವಸ್ತುಗಳಿಗೂ ಆದಿ ಅಂತ್ಯ ಎನ್ನುವುದು ಅನಿವಾರ್ಯ, ಭಿತ್ತಿಚಿತ್ರಗಳು ಇದರಿಂದ ಹೊರತೇನಲ್ಲ. ಆದರೆ ಅತ್ಯಮೂಲ್ಯ ಪಳೆಯುಕೆಗಳನ್ನು ಸಂಪ್ರದಾಯ ಸಂಸ್ಕೃತಿಯ ಕುರುಹುಗಳನ್ನು ಸಂರಕ್ಷಿಸುವುದು ನಮ್ಮೆಲ್ಲರ ಆದ್ಯಕರ್ತವ್ಯ. ಎರಡು

ಮೂರು ಶತಮಾನಗಳು ಕಳೆದುಹೋಗಿರುವ ತುಮಕೂರು ಭಿತ್ತಿಚಿತ್ರಗಳ ಹಲವಾರು ನೆಲೆಗಳು ನಾಶವಾಗಿದ್ದು ಕೆಲವು ನಾಶದ ಅಂಚಿನಲ್ಲಿದ್ದು, ಮತ್ತೆ ಕೆಲವು ಅಲ್ಪಸ್ವಲ್ಪ ಗುರುತಿಸಿಕೊಂಡಿವೆ. ಈ ಭಿತ್ತಿ ಚಿತ್ರಗಳ ಸಂರಕ್ಷಣೆಯು ಸ್ಥಳೀಯ ನಾಗರೀಕರು, ಯುವಕರು, ಕಲಾವಿದರು, ಕಲಾಶಾಲೆಗಳು, ಸಂಘಸಂಸ್ಥೆಗಳು, ಆರ್ಕ್ಯಾಲಜಿ ಡಿಪಾರ್ಟ್‌ಮೆಂಟ್‌ಗಳು ಮುಖ್ಯವಾಗಿ ಕಾರ್ಯ ನಿರ್ವಹಿಸಬೇಕಾಗಿದೆ.

ನಾಗರೀಕರು ಭಿತ್ತಿ ಚಿತ್ರಗಳು, ವಾಸ್ತುಶಿಲ್ಪ, ದೇಗುಲಗಳು ಪ್ರಾಕೃತಿಕ ವಿಕೋಪಕ್ಕೆ ಒಳಗಾಗುವುದು ಸಹಜ ಇದನ್ನು ಯಾರಿಂದಲೂ ತಪ್ಪಿಸಲಿಕ್ಕೆ ಸಾಧ್ಯವಿಲ್ಲ. ಆದರೆ ಸ್ಥಳೀಯ ಯಾತ್ರಿಗಳು ಅಥವಾ ದೇವರ ಭಕ್ತರಿಂದ ಮುಟ್ಟದಂತೆ, ಕೆರೆಯದಂತೆ, ಹಾಗೂ ದೇವಾಲಯದ ಹಬ್ಬ ಜಾತ್ರೆ ಅಥವಾ ವಿಶೇಷ ದಿನಗಳಲ್ಲಿ ಸುಣ್ಣ ಬಣ್ಣ ಹೊಡೆಯುವಾಗ ಸಂರಕ್ಷಿಸುವುದು. ಇನ್ನಿತರೆ ಮೂಲಗಳಿಂದ ಆಗುವ ಅವಗಡಗಳನ್ನು ತಡೆಯುವುದು, ದೇವಾಲಯದ ಕಾರ್ಯಕಾರಿ ಸಮಿತಿಯು ಭಿತ್ತಿ ಚಿತ್ರಗಳಿಗೆ ನೀರು ಬೀಳುವುದು, ಮಳೆಯಿಂದ ಸೋರುವಿಕೆ ಹಾಗೂ ಗಾರೆ ಭಿತ್ತಿಯು ಬೀಳದಂತೆ ಬಿದ್ದಿದ್ದರೆ, ಅಲ್ಲಿಗೆ ಮರು ಪ್ಯಾಚ್ ಮಾಡಿಸಿ ನುರಿತ ಕಲಾವಿದರಿಂದ ಮರು ಕೃತಿರಚನೆ ಕೆಲಸ ಮಾಡಿಸುವುದು, ದೇವಾಲಯದ ಮೇಲ್ಭಾಗದಲ್ಲಿ ಸಿಮೆಂಟಿನಿಂದ ಚುರಿಕಿ ಹಾಕಿಸುವುದು, ದೇವಾಲಯಕ್ಕೆ ಬಂದ ನಾಗರೀಕರಿಂದ ರಕ್ಷಣೆಗೆ ಒಬ್ಬ ವ್ಯಕ್ತಿಯನ್ನು ನೇಮಿಸುವುದರ ಜೊತೆಗೆ ಆಯಾ ದೇವಾಲಯದಲ್ಲಿನ ಭಿತ್ತಿ ಚಿತ್ರಗಳ ಬಗ್ಗೆ ತಿಳಿದುಕೊಂಡಿದ್ದರೆ ಉಪಯುಕ್ತ.

ಜಿಲ್ಲೆಯ ಕಲಾವಿದರು ಕಲಾಶಾಲೆಗಳು ಜಿಲ್ಲೆಯಲ್ಲಿನ ಸಾಂಸ್ಕೃತಿಕ ಪರಿಸರದ ಬಗ್ಗೆ ಅರಿವು ಮೂಡಿಸುವುದು, ವಿದ್ಯಾರ್ಥಿಗಳಿಗೆ ತಿಂಗಳಿಗೊಮ್ಮೆ ಯಾದರು ಭಿತ್ತಿ ಚಿತ್ರಗಳಿರುವ ಸ್ಥಳಗಳಿಗೆ ಭೇಟಿ ನೀಡುವುದು. ಸಾಧ್ಯವಾದರೆ ಶಿಕ್ಷಕರು, ಕಲಾವಿದರು ಹಾಗೂ ವಿದ್ಯಾರ್ಥಿಗಳು ಅಲ್ಲಿನ ಕೃತಿಗಳಿಗೆ ಚ್ಯುತಿ ಬರದಂತೆ ಮರು ಕೃತಿಮಾಡುವುದು. ವಿದ್ಯಾರ್ಥಿಗಳಿಗೆ ಶಿಕ್ಷಕರು ಉತ್ತಮ ಮಾರ್ಗದರ್ಶನ ನೀಡಿ ಭಿತ್ತಿ ಚಿತ್ರಗಳ ಮೂಲ ಆಕಾರಕ್ಕೆ ಕೊರತೆಯಾಗದಂತೆ ಹಾಗೂ ಬದಲಾವಣೆಗೆ ಅವಕಾಶ ಮಾಡದೆ ಇರುವಂತೆ ತಿಳಿಸಬೇಕು. ಹಾಳಾಗುತ್ತಿರುವ ಭಿತ್ತಿ ಚಿತ್ರಗಳನ್ನು ಯಥಾಸ್ಥಿತಿಯ ಮರುಕೃತಿ ಮಾಡುವುದರಿಂದ ಸಾಧ್ಯವಾದರೆ ಟ್ರೇಸಿಂಗ್ ಪೇಪರ್ ಬಳಸುವುದರಿಂದ ಹಾಗೂ ಸ್ಥಳದಲ್ಲೇ ಚಿತ್ರರಚನೆ ಮಾಡಿದರೆ ಮೂಲ ಚಿತ್ರದ ರೇಖೆಗಳು ಭಾವನೆ, ಸಂಯೋಜನೆ ಹಾಗೂ ಬಣ್ಣಗಳ ಉತ್ತಮ ಅಧ್ಯಯನಕ್ಕೆ ಉಪಯೋಗವಾಗುತ್ತದೆ.

ಸಿರಾದ ರೇವಣಸಿದ್ಧೇಶ್ವರ ದೇವಾಲಯದ ಭಿತ್ತಿ ಚಿತ್ರಗಳು, ಕೆರೆಗೋಡಿ ರಂಗಾಪುರ ದೇವಾಲಯದ ಭಿತ್ತಿ ಚಿತ್ರಗಳು, ತುಮಕೂರು ನಲ್ಲಪ್ಪನವರ ಮನೆಯ ಭಿತ್ತಿ ಚಿತ್ರಗಳನ್ನ ಕುರಿತು ತುಮಕೂರಿನ ಕಲಾವಿದರಾದ ಕಿಶೋರ್‌ಕುಮಾರ್, ಪಿ.ಪ್ರಸಾದ್, ಡೇವಿಡ್, ಅಶೋಕ್, ಬಾಬುರಾವ್, ಕುಂದುಗೋಳ್, ಎಸ್.ಹೆಚ್.ನಾಗರಾಜು, ಸ್ವಾಮಿ, ಪ್ರಸನ್ನ, ಕೋಟೆಕುಮಾರ್ ಮುಂತಾದ ಕಲಾವಿದರ ತಂಡವು ಮರುಕೃತಿಗಳನ್ನ ಮಾಡಿದ್ದು ಅವುಗಳಲ್ಲಿ ಪ್ರತಿಯೊಬ್ಬರಲ್ಲಿಯೂ ಒಂದೊಂದು ಕೃತಿಯನ್ನು ಲಲಿತಕಲಾ ಅಕಾಡೆಮಿಯು ಪಿ.ಆರ್.ತಿಪ್ಪೇಸ್ವಾಮಿಯವರ ನೇತೃತ್ವದಲ್ಲಿ ಸಂಗ್ರಹಿಸಲಾಗಿದೆ.

ಕಲಾವಿದರು ಯಥಾರೂಪ ಮರುಕೃತಿಯನ್ನ ಮಾಡುವ ಸಂದರ್ಭದಲ್ಲಿ ಪ್ರಸ್ತುತ ಭಿತ್ತಿ ಚಿತ್ರಗಳ ಸ್ಥಿತಿಯನ್ನ ಪ್ರತಿಬಿಂಬಿಸುವ ರೀತಿ ಚಿತ್ರಗಳನ್ನೂ ರಚಿಸುತ್ತಾರೆ. ಕೆಲವರು ಅದೇ ಚಿತ್ರಗಳಲ್ಲಿ ಅಳಿಸಿಹೋದ ಅಂಶವನ್ನು ಊಹೆಯ ಆಧಾರದ ಮೇಲೆ ತುಂಬಿದ ಕೆಲಸವನ್ನು ಮಾಡಿದ್ದಾರೆ. ಉದಾಹರಣೆಗೆ ಪಿ.ಪ್ರಸಾದ್‌ರವರು ತುಮಕೂರು ನಲ್ಲಪ್ಪನವರು ಮನೆಯ ಭಿತ್ತಿ ಚಿತ್ರಗಳ ಮರು ಕೃತಿಯನ್ನು ಕಳೆದುಹೋದ, ಜಾಗಗಳಿಗೆ ಅವರದೇ ಆದ ಕಲ್ಪನೆಯಲ್ಲಿ ಆ ಜಾಗವನ್ನು ತುಂಬಿದ್ದಾರೆ.

ಕಲಾವಿದ ಕಿಶೋರ್‌ಕುಮಾರ್ ಗಿರಿಜಾಕಲ್ಯಾಣ, ಸೀತಾಕಲ್ಯಾಣದಂತಹ ಚಿತ್ರಗಳನ್ನು ಆಧಾರ ಗ್ರಂಥಗಳ ಸಹಕಾರದಿಂದ ದೊಡ್ಡ ಅಳತೆಯ ಅಂದರೆ ಸುಮಾರು ೬x೮, ೬x೪, ಹೀಗೆ ದೊಡ್ಡ ಪ್ರಮಾಣದಲ್ಲಿ ಭಿತ್ತಿ ಚಿತ್ರಗಳನ್ನ ರಚನೆ ಮಾಡಿದ್ದಾರೆ. ಈ ರೀತಿ ಮಾಡುವುದರಿಂದ ಭಿತ್ತಿ ಚಿತ್ರಗಳು ಮೂಲ ಸ್ಥಳದಲ್ಲಿ ಇಲ್ಲವಾದರೂ ನುರಿತ ಕಲಾವಿದ ಸಂಗ್ರಹದ ಮರುಕೃತಿಗಳು ಸಂಗ್ರಹವಾಗಿವೆ. ಅವುಗಳ ಪರಂಪರೆಯು ಹಾಗೆಯೇ ಮುಂದುವರೆಯಲು ಅವಕಾಶವಾಗುತ್ತದೆ. ತುಮಕೂರಿನ ಮನೆಯು ಪ್ರಸ್ತುತ ಇಲ್ಲವಾದರೂ ಕಲಾವಿದರ ಮರುಕೃತಿಯಿಂದ ಉಳಿದಿವೆ. ಸಿರಾ ರೇವಣ ಸಿದ್ದೇಶ್ವರ ದೇವಾಲಯದ ಕೆಲವು ಕಲಾಕೃತಿಗಳು ಮಾತ್ರ ಉಳಿದಿದ್ದು ಹಾಳಾದ ಕಲಾಕೃತಿಗಳು ಕಲಾವಿದರ ಸಂಗ್ರಹದ ಮರುಕೃತಿಗಳು ಇವೆ. ಭಿತ್ತಿ ಚಿತ್ರಗಳ ರಕ್ಷಣೆಯು ಕಲಾವಿದರಿಗೆ ಹಾಗೂ ಕಲಾ ಶಾಲೆಗಳಿಗೆ ಹೆಚ್ಚಿನ ಜವಾಬ್ದಾರಿಯಾಗಿದೆ. ಕಲಾ ಶಾಲೆಗಳು ಭಿತ್ತಚಿತ್ರದ ಸ್ಥಳಗಳಲ್ಲಿ ಕಲಾ ಶಿಬಿರದಂತಹ ಕಾರ್ಯಕ್ರಮಗಳ ಮೂಲಕ ಅಲ್ಲಿಯ ನಾಗರೀಕರಿಗೂ ಅರಿವು ಮೂಡಿಸಿದಂತಾಗುತ್ತದೆ.

ಕಲಾ ಶಿಬಿರ ಮತ್ತು ಭಿತ್ತಿ ಚಿತ್ರಗಳ ಅರಿವಿನ ಕಾರ್ಯಗಾರವಾದರೆ ತಪ್ಪೇನಿಲ್ಲ. ಉದಾಹರಣೆಗೆ ಕೆರೆಗೋಡಿ ರಂಗಾಪುರದ ಭಿತ್ತಿ ಚಿತ್ರಗಳು ಅಲ್ಲಿಯ ಜನರ ಗಮನಕ್ಕೆ ಬಂದಿರಲಿಲ್ಲ, ಇತ್ತೀಚಿನ ದಿನಗಳಲ್ಲಿ ತುಮಕೂರಿನ ರವೀಂದ್ರ ಕಲಾನಿಕೇತನ ಕಲಾಶಾಲೆಯ ಶಿಬಿರಗಳಿಂದ ಅಲ್ಲಿಯ ಭಿತ್ತಿ ಚಿತ್ರಗಳ ಮೇಲೆ ಕಾಳಜಿ ಮೂಡಿಸಿದಂತಾಗಿ ಪ್ರಸ್ತುತ ಭಿತ್ತಿ ಚಿತ್ರಗಳು ನಮ್ಮೂರಿನ ಅಮೂಲ್ಯ ಆಸ್ತಿ ಅನ್ನುವಷ್ಟರ ಮಟ್ಟಿಗೆ ಅರಿವು ಮೂಡಿದೆ. ಹೀಗೆ ಕಲಾವಿದರು ಕಲಾಶಾಲೆಗಳು ಹೆಚ್ಚು ಕಾಳಜಿಯನ್ನು ವಹಿಸಿ ಭಿತ್ತಿಚಿತ್ರಗಳನ್ನು ಹಲವಾರು ವಿಧಾನಗಳಿಂದ ಉಳಿಸುವ ಕಾರ್ಯ ಮಾಡಬೇಕಿದೆ.

ಸರ್ಕಾರದ ಮಟ್ಟದಲ್ಲಿ ಪುರಾತತ್ವ ಇಲಾಖೆಗಳು ಇಂತಹ ಭಿತ್ತಿ ಚಿತ್ರಗಳಿರುವ ಸ್ಥಳಗಳಿಗೆ ವಿಶೇಷ ಒತ್ತು ನೀಡುವುದರ ಮುಖಾಂತರ ಹಾಗೂ ಅಲ್ಲಿ ಚಿತ್ರಗಳ ಮಾಹಿತಿಯನ್ನು ಬಲ್ಲವರಿಂದ ದೇವಾಲಯಗಳಿಗೆ ಬಂದ ಯಾತ್ರಿಗಳಿಗೆ ಅವುಗಳ ಹಿನ್ನಲೆಯನ್ನು ರಚನಾ ವಿಧಾನ ಮುಂತಾದ ಪ್ರಾಥಮಿಕ ಮಾಹಿತಿಯನ್ನು ತಿಳಿಸುವುದರಿಂದ ಜನರಿಗೆ ಭಿತ್ತಿ ಚಿತ್ರಗಳ ಅರಿವು ಮೂಡುತ್ತದೆ. ಸರ್ಕಾರದಿಂದ ವಿಶೇಷ ಅನುಮತಿ ಪಡೆದು ರಕ್ಷಣೆಯನ್ನು ಒದಗಿಸುವುದು ಆದ್ಯಕರ್ತವ್ಯವಾಗಿದೆ.

ಈ ಮೇಲಿನ ಹೇಳಿಕೆಗಳು ಪ್ರಸ್ತುತ ನಡೆಯಬೇಕಾದ ಕಾರ್ಯಗಳಾಗಿದ್ದು, ಇನ್ನೂ ಪುರಾಣ ಗ್ರಂಥಗಳಲ್ಲಿ ಭಿತ್ತಿ ತಯಾರಿಕೆಯ ಮುನ್ನ ಹಾಗೂ ರಚನೆಗೊಂಡ ನಂತರ ತೆಗೆದುಕೊಳ್ಳಬೇಕಾದ

ಮುನ್ನೆಚ್ಚರಿಕೆ ಕ್ರಮವನ್ನು ಶಿವತತ್ವ ರತ್ನಾಕರ, ವಿಷ್ಣುಧರ್ಮೋತ್ತರ ಪುರಾಣ, ಮಾನಸೋಲ್ಲಾಸ ಅಥವಾ ಅಭಿಲಾಷಿತಾರ್ಥ ಚಿಂತಾಮಣಿ ಮಹಾಗ್ರಂಥಗಳಲ್ಲಿ ಒಂದೊಂದು ರೀತಿಯಲ್ಲಿ ರಕ್ಷಣೆ ಕಾರ್ಯವನ್ನು ತಿಳಿಸುತ್ತಾರೆ. ಅಬಿಲಾಷಿತಾರ್ಥ ಚಿಂತಾಮಣಿಯಲ್ಲಿ ಚಿತ್ರ ಒಣಗಿದ ನಂತರ ಮೇಲೆ ಹಂದಿಯ ಕೋರೆಯ ಹಲ್ಲಿನಿಂದ ಚೆನ್ನಾಗಿ ಕುಟ್ಟಿದರೆ ಚಿನ್ನದ ಬಣ್ಣವು ಇರುವ ಜಾಗದಲ್ಲಿ ವಿದ್ಯುತ್ ನಂತೆ ಹೊಳಪಾದ ಕಾಂತಿಯನ್ನು ಪಡೆಯುತ್ತದೆ ಎಂದೂ ವಿಷ್ಣುಧರ್ಮೋತ್ತರ ಪುರಾಣದಲ್ಲಿ ಚಿತ್ರ ರಚನೆಯ ನಂತರ ಸ್ಥಿರತೆ ಕೊಡಲು ಲೇಪನಕ್ಕೆ ಸ್ತಂಭನ ಎಂದು ಕರೆದಿದ್ದು, ಕುದಿಸಿದ ಚರ್ಮದ ನೀರು ಅಥವಾ ಬಹುಲಾ ಎಂಬುದಾಗಿದೆ.

ಕೆಲವು ಆಧುನಿಕ ಕ್ರಮಗಳಿಂದ ಭಿತ್ತಿ ಚಿತ್ರಗಳ ರಕ್ಷಣೆ ಮಾಡಬಹುದು. ಇತ್ತೀಚಿನ ದಿನಗಳಲ್ಲಿ ಅತ್ಯಾಧುನಿಕ ತಂತ್ರಜ್ಞಾನದಿಂದ ಛಾಯಾಚಿತ್ರ ಮಾಡುವುದು ವಿಡಿಯೋ ಮಾಡುವುದು ಕಂಡುಬರುತ್ತದೆ. ವಿಭಿನ್ನ ರೀತಿಯಿಂದ ಫೋಟೊಗ್ರಾಫಿಕ್ ಮಾಡಿ ಜೋಪಾನ ಮಾಡುವುದರಿಂದ ಪ್ರಸ್ತುತ ಬಣ್ಣದ ರೇಖೆಗಳು ಮುಂದಿನ ಅಧ್ಯಯನಕ್ಕೆ ಉಪಯುಕ್ತವಾಗುತ್ತದೆ. ಅದೇ ರೀತಿ ವಿಡಿಯೋ ಚಿತ್ರೀಕರಣ ಮಾಡುವುದರಿಂದ ಸೀಡಿಗಳ ಮುಖಾಂತರ ಭಿತ್ತಿ ಚಿತ್ರಗಳ ನೇರವಾಗಿ ಪ್ರಸ್ತುತ ಸ್ಥಿತಿಗತಿಗಳನ್ನು ನೋಡಬಹುದು. ಅಧ್ಯಯನಕ್ಕೆ ಅನುಕೂಲಕರ ಛಾಯಾಚಿತ್ರಗಳು ಅಷ್ಟೇ ಸಹಕಾರಿ. ಛಾಯಾ ಚಿತ್ರಗಳನ್ನು ಸ್ಲೈಡ್ಸ್ ಮಾಡಿ ಸಾರ್ವತ್ರಿಕ ಪ್ರದರ್ಶನಕ್ಕೆ ಅನುಕೂಲ ಮತ್ತು ಭಿತ್ತಿ ಚಿತ್ರಗಳ ಡೆಮಾಸ್ಟ್ರೇಷನ್ ಮಾಡಲು ಸೂಕ್ತವಾದ ಮಾದರಿಯಾಗಿದೆ. ಛಾಯಾಚಿತ್ರ ಮತ್ತು ವೀಡಿಯೊ ಮಾಡುವುದರಿಂದ ಅಧ್ಯಯನಕಾರರಿಗೆ ಅಂದಿನ ಆಡಳಿತ ಕ್ರಮ, ರಾಜಕೀಯ ವ್ಯವಸ್ಥೆ, ಅಲ್ಲಿಯ ಸಾಂಸ್ಕೃತಿಕ ಪರಿಸರ ಮುಂತಾದ ಚಾರಿತ್ರಿಕ ಅಧ್ಯಯನಕ್ಕೆ ಬಹಳ ಮುಖ್ಯವಾದ ಅಂಶಗಳನ್ನು ತಿಳಿಯಲು ಸಹಕಾರಿಯಾಗುತ್ತದೆ. ಈ ಮಾಧ್ಯಮವು ಸರಳವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಕೊಂಡೊಯ್ಯಲು ಸೂಕ್ತವಾಗಿರುತ್ತದೆ.

ಔಷಧ ವೃಕ್ಷದ ರಸವನ್ನು ಲೇಪಿಸುವುದರಿಂದ ವರ್ಣಗಳಿಗೆ ದಾರ್ಢ್ಯ ಉಂಟಾಗುತ್ತದೆ. ಎಲ್ಲ ಬಣ್ಣಗಳಿಗೂ ಸಿಂಧೂರ ಸಹಿತವಾದ ಕ್ಷೀರವು ಸಂಸ್ಕಾರಕ್ಕೆ ಉಪಯೋಗವಾಗುತ್ತದೆ. ನೀರಿನಲ್ಲಿ ತೊಳೆದರೂ ಹೋಗುವುದಿಲ್ಲ ಎಂದೂ ತಿಳಿಸುತ್ತದೆ. ಆಧುನಿಕ ಪದ್ಧತಿಯಲ್ಲಿ ಒಡೆದ ಕೆನೆಹಾಲು ಹಾಗೂ ಶುದ್ಧ ಆಲ್ಕೋಹಾಲ್‌ಗಳಿಂದ ಸಂಸ್ಕರಿಸಿದ ದ್ರಾವಣವನ್ನು ರೇಖಾಚಿತ್ರಗಳ ಮೇಲೆ ತುಂತುರು ರೂಪದಲ್ಲಿ ಸಿಂಪಡಿಸಿ ಸ್ತಂಭನ ಕ್ರಿಯೆ ಮಾಡುತ್ತಾರೆ. ರಾಳವನ್ನು ಕುಸುಬೆ ಅಥವಾ ಅಗಸೆ ಎಣ್ಣೆಯಲ್ಲಿ ಕಲಸಿ, ಕುದಿಸಿ ಚಿತ್ರಗಳ ಮೇಲೆ ಮರದ ಫಲಕದ ಮೇಲೆ ಮಾಡಿ ಹಚ್ಚುವುದು ಒಂದು ಜಾನಪದೀಯ ಪದ್ಧತಿ. ಕರ್ನಾಟಕ ಕಾದಂಬರಿಯಲ್ಲಿ 'ಕುಂಚಿಕೆಯಿಂದಲೇ ಕರ್ಚಿ ಪಾರದಂದೊಡೆದರೋ' ಎಂಬ ಪ್ರಯೋಗವಿದ್ದು[9] ಪಾದರಸವನ್ನು ಸ್ತಂಭನಕ್ಕಾಗಿ ಬಳಸುತ್ತಿದ್ದ ಸೂಚನೆಯಿದೆ. ಇದಿಷ್ಟು ಮಹಾಗ್ರಂಥಗಳಲ್ಲಿ ಭಿತ್ತಿ ಚಿತ್ರಗಳ ರಕ್ಷಣೆಗೆಂದು ಮಾಡುತ್ತಿದ್ದ ಮುನ್ನೆಚ್ಚರಿಕೆ. ಆದರೆ ಆಧುನಿಕ ಕಾಲದಲ್ಲಿ ಈ ಮೇಲಿನ ಹೇಳಿಕೆಗಳನ್ನು ಅನುಸರಿಸುವುದು ಕಷ್ಟಕರವೇ ಸರಿ.

ಭಿತ್ತಿಯ ಗಾರೆಯು ಹಳೆಯದಾಗಿದ್ದು, ಅದು ಉದುರಿಹೋದ ಸ್ಥಳದಲ್ಲಿ ಪುನಃ ಜೀರ್ಣೋದ್ಧಾರ ಮಾಡುವುದು ಒಂದಾದರೆ, ಇಡಿ 'ಚಿತ್ರವನ್ನು ಒಂದು ಕಡೆ ಟ್ರೇಸಿಂಗ್ ಮಾಡಿ ನಂತರ ಸಂಪೂರ್ಣ ಗಾರೆ ತೆಗೆದು ಹೊಸದಾಗಿ ಹಾಕಿದ ಗಾರೆಯ ಮೇಲೆ ಹಿಂದಿನ ಟ್ರೇಸಿಂಗ್ ಹಾಗೂ ಛಾಯಾ ಚಿತ್ರಗಳ ಆಧಾರದ ಮೇಲೆ ನುರಿತ ಕಲಾವಿದರು ಮರು ಚಿತ್ರಣ ಮಾಡವುದನ್ನು ಭಿತ್ತಿ ಚಿತ್ರಗಳ ರಕ್ಷಣೆ ಎಂದೇ ಪರಿಗಣಿಸುತ್ತಾರೆ. ಈ ರೀತಿಯ ಪ್ರಕ್ರಿಯೆಯು ಹಿಂದೆ ತಾಳೆಯೋಲೆಯಲ್ಲಿ ಬರೆದಿದ್ದ ಕಾವ್ಯಾದಿ ಗ್ರಂಥಗಳು ಆಗಾಗ್ಗೆ ನಕಲು ಮಾಡಿ ಇರಿಸಿಕೊಳ್ಳುತ್ತಿದ್ದರು.[೨]

ಅನಂತರ ಕಾಲದಲ್ಲಿ ಮರು ತಿದ್ದುಪಡಿಯು ಶ್ರೀರಂಗಪಟ್ಟಣದ ದರಿಯಾದೌಲತ್, ಹಂಪಿ ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳಾಗಿದ್ದು, ಮರುತಿದ್ದುವ ಕಾರ್ಯದಲ್ಲಿ ಹಲವಾರು ಬದಲಾವಣೆಗಳು ಕಂಡು ಬಂದಿರುವುದು ಇತಿಹಾಸವನ್ನೇ ಬದಲಿಸುವ ಅಥವಾ ಅಲಂಕಾರಕ್ಕೆ ಚ್ಯುತಿತರುವ ಕಾರ್ಯ ನಡೆದಿದೆ. ಉದಾಹರಣೆಗೆ ಹಂಪಿಯ ಭಿತ್ತಿ ಚಿತ್ರಗಳಲ್ಲಿ ವಿದ್ಯಾರಣ್ಯರ ಮೆರವಣಿಗೆ ದೃಶ್ಯವು ಹಾಗೂ ಶ್ರೀರಂಗಪಟ್ಟಣದ ಭಿತ್ತಿಚಿತ್ರದಲ್ಲಿ ಪುರುಷ, ಸ್ತ್ರೀ ಹಾಗೂ ಮಗುವಿನ ಚಿತ್ರಗಳು ತಿದ್ದುಪಡಿಯಾದ ನಂತರ ಇಲ್ಲವಾಗಿವೆ.

ತುಮಕೂರು ಜಿಲ್ಲೆಯಲ್ಲಿಯೂ ಈ ರೀತಿಯ ಅವಗಡಗಳು ಸಂಭವಿಸಿರುವುದು ಅಮೃತೂರಿನ ಭಿತ್ತಿ ಚಿತ್ರಗಳಲ್ಲಿ ಕಂಡುಬರುತ್ತದೆ. ಹೊರರೇಖೆಗಳು ಅದಲು ಬದಲಾಗಿ ರಚಿಸಿರುವುದು ಕಂಡು ಬರುತ್ತದೆ. ಇದು ನುರಿತ ಕಲಾವಿದರ ಹಾಗೂ ಸಲಹೆ ಮಾರ್ಗದರ್ಶನವಿಲ್ಲವಾದಾಗ ಇಂತಹ ಅವಸಾನಗಳು ಜರಗುವುದು ಸಹಜ. ಆದರೆ ಉತ್ತಮ ರೀತಿಯಲ್ಲಿ ತಿದ್ದುವುದಾದರೆ ಉತ್ತಮ ಬೆಳವಣಿಗೆ ಮತ್ತು ರಕ್ಷಣೆ. ಕೆರೆನೋಡಿಯ ಭಿತ್ತಿ ಚಿತ್ರಗಳು ಮೂರು ಅಂಕಣಗಳಲ್ಲಿ ಒಂದು ಅಂಕಣವು ಭಿತ್ತಿ ಚಿತ್ರ ರಚನಾ ವಿಧಿ ವಿಧಾನದ ಪದ್ಧತಿಯಲ್ಲಿ ಸಾಂಪ್ರದಾಯ ಬದ್ಧವಾಗಿ ರಚನೆಗೊಂಡಿದ್ದು, ಉಳಿದ ಎರಡು ಅಂಕಣದಲ್ಲಿರುವ ಚಿತ್ರಗಳು ಜಾನಪದ ಶೈಲಿಯನ್ನು ಹೋಲುತ್ತವೆ. ಇಲ್ಲಿಯೂ ಸಹಿತ ಇಂತಹ ತಿದ್ದುಪಡಿಯ ಕಾರ್ಯ ನಡೆದಿರಬೇಕು ಎನ್ನುವುದು ಅನುಮಾನಕ್ಕೆ ಎಡೆಮಾಡಿಕೊಡುತ್ತದೆ. ಇದು ನಿಜವಾದರೆ ಕೆರೆಗೋಡಿಯ ಭಿತ್ತ ಚಿತ್ರಗಳು ಒಂದೆರಡು ಬಾರಿ ರಕ್ಷಣೆಗೊಂಡಿವೆ ಎನ್ನುವುದು ಸತ್ಯವಾಗುತ್ತದೆ. ಆದರೆ ಈ ಮಾತಿನಲ್ಲಿ ಯಾವುದೇ ಆಧಾರವಿರುವುದಿಲ್ಲ. ಮತ್ತೊಂದು ರಕ್ಷಣಾ ವಿಧಾನವೆಂದರೆ ಕಲಾ ಶಾಲಾ ಕಾಲೇಜುಗಳಲ್ಲಿ ಭಿತ್ತಿ ಚಿತ್ರಗಳ ಮರುಕೃತಿ ರಚನೆ, ವಿಧಾನ, ತಂತ್ರಗಾರಿಕೆ ಎಂಬ ವಿಷಯದ ಬಗ್ಗೆ ವಿದ್ಯಾರ್ಥಿಗಳು ಅಧ್ಯಯನ ಮಾಡಬೇಕು. ಕಲಿತ ವಿದ್ಯಾರ್ಥಿಗಳು ಮೂಲ ಭಿತ್ತಿ ಚಿತ್ರಕ್ಕೆ ಯಾವುದೇ ಚ್ಯುತಿ ಬರದಂತೆ ಬಣ್ಣ, ರೇಖೆ, ಸಂಯೋಜನೆ ಹಂಗೂ ಅಳತೆ, ಯಾವುದರಲ್ಲಿಯೂ ವ್ಯತ್ಯಾಸ ಬರುವುದಿಲ್ಲ, ಟ್ರೇಸಿಂಗ್ ಪೇಪರ್ ಬಳಸಿ ಈ ಪದ್ಧತಿಯು ಪಾಶ್ಚಿಮಾತ್ಯ ಕಲಾಶಾಲೆಗಳು ಪ್ರಾರಂಭಗೊಂಡ ನಂತರ ಲೇಡಿಹೆರಿಂಗ್ ಹ್ಯಾಮ್ ಎನ್ನುವ ಕಲಾವಿದೆ ಕಲ್ಕತ್ತ-ಕಲಾಶಾಲೆಯ ವಿದ್ಯಾರ್ಥಿಗಳೊಂದಿಗೆ ಅಜಂತಾ, ಬಾದಾಮಿ ಭಿತ್ತಿಚಿತ್ರಗಳನ್ನು ನಕಲು ಮಾಡುವುದು

ಪ್ರಾರಂಭ ಮಾಡಿದರು. ಈ ಮೊದಲು ನಕಲು ಕಾರ್ಯದಲ್ಲಿ ಮಿಣಜಗಿ, ನಂದಲಾಲ್ ಬೌಸ್ ಅಹಿವಾಹಿ, ಮುಂತಾದ ಕಲಾವಿದರು ಭಾಗವಹಿಸಿದ್ದರು. ದಖ್ಖನಿ ಚಿಕಣಿ ಚಿತ್ರಗಳನ್ನು ನಕಲು ಮಾಡುವುದು ಹೆಚ್ಚಾಗಿ ಕಂಡು ಬರುತ್ತದೆ.

ಈ ಮೇಲಿನ ವಿಧಾನಗಳನ್ನು ರಕ್ಷಣೆಕಾರ್ಯಗಾರಗಳು ಭಿತ್ತಿಚಿತ್ರಗಳ ಸಂರಕ್ಷಣೆಯಲ್ಲಿ ಸಕ್ರೀಯವಾದ ಪಾಲದಾರಿಕೆಯನ್ನು ಪಡೆದುಕೊಂಡಿವೆ. ಆದರೆ ದುರಾದೃಷ್ಟವಶಾತ್ 'ಕೆಟ್ಟ ಮೇಲೆ ಬುದ್ಧಿ ಬಂತು' ಎಂಬ ಗಾದೆಯಂತೆ ತುಮಕೂರು ಜಿಲ್ಲೆಯಲ್ಲಿ ಹಲವಾರು ಭಿತ್ತಿಚಿತ್ರಗಳ ನೆಲೆಗಳು ಹಾಳಾದ ಮೇಲೆ ಅಲ್ಲಲ್ಲಿ ರಕ್ಷಣೆ ಕಾರ್ಯವನ್ನು ಕೈಗೆತ್ತಿಕೊಂಡಿರುವುದು ಸಮಾಧಾನದ ಸಂಗತಿ. ಇದೇ ಪ್ರಕಾರವಾಗಿ ಇನ್ನು ಹೆಚ್ಚಿನ ಪ್ರಮಾಣದಲ್ಲಿ ಹಲವಾರು ವಿಧಾನಗಳ ಮೂಲಕ ಭಿತ್ತಿ ಚಿತ್ರಗಳ ರಕ್ಷಣೆಕಾರ್ಯ ನಡೆದರೆ ಪ್ರಸ್ತುತ ಉಳಿದಿರುವ ಭಿತ್ತಿ ಚಿತ್ರಗಳನ್ನು ಇನ್ನು ಸ್ವಲ್ಪ ಕಾಲ ಮುಂದಿನ ಪೀಳಿಗೆಗಳು ನೋಡಬಹುದು ಎನ್ನುವುದು ಕಲಾವಿದರ ಕಲಾಕ್ಷೇತ್ರದ ಇಂಗಿತ.

## ಅಡಿಟಿಪ್ಪಣಿ

೧. ಡಾ.ಅ.ಲ.ನರಸಿಂಹನ್, ಕರ್ನಾಟಕ ಭಿತ್ತಿ ಚಿತ್ರ ಪರಂಪರೆ, ಪುಟ-೧೫೪

೨. ಅದೇ, ಪುಟ-೧೫೫

# ಸಮಾರೋಪ

ತಮಕೂರು ಜಿಲ್ಲೆಯಲ್ಲಿ ಬರುವ ಸಿಬಿ ಭಿತ್ತಿಚಿತ್ರಗಳ ಸವಿಸ್ತಾರವಾದ ಅಧ್ಯಯನದ ಅಗತ್ಯ ಇದೆ. ಪ್ರಸ್ತುತ ಅಧ್ಯಯನದ ವಿಸ್ತಾರವು ಎಂ.ಫಿಲ್ ಅಧ್ಯಯನಕ್ಕೆ ಪೂರಕವಾಗಿ ಈ ಅಧ್ಯಯನವನ್ನು ಕೈಗೊಂಡಿದ್ದು ಇಲ್ಲಿನ ಉಳಿದ ಚಿತ್ರಗಳ ಸಂರಕ್ಷಣೆ ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಜಿಲ್ಲಾದ್ಯಂತ ಇದ್ದ ಭಿತ್ತಿ ಚಿತ್ರಗಳು ಕಾಲ ಕಳೆದಂತೆಲ್ಲಾ ಮಾಯವಾಗುತ್ತಿದ್ದು ಅವುಗಳ ರಕ್ಷಣೆ ಕಾರ್ಯ ತುರ್ತಾದ ಅಗತ್ಯತೆ ಇದೆ. ಮೇಲೆ ಸೂಚಿಸಿದ ಸಿಬಿ ದೇವಾಲಯವು ಭಿತ್ತಿ ಚಿತ್ರಗಳ ಕಣಜ ಅವುಗಳ ಸಂಪೂರ್ಣ ಪತ್ಯೇಕ ಅಧ್ಯಯನವನ್ನು ಕೈಗೊಳ್ಳಬಹುದಾದಷ್ಟು ವಿಷಯವನ್ನು ತನ್ನೊಡಲಲ್ಲಿ ತುಂಬಿಕೊಡು ಪ್ರಕೃತಿಯ ದಿನದಾಟದಲ್ಲಿ ದಿನೆ ದಿನೆ ಸೊರಗುತ್ತಿದೆ. ಇಂತಹ ಹಲವಾರು ಚಿತ್ರಗಳು ಈಗಾಗಲೇ ಹಾಳಾಗಿವೆ. ಚಿತ್ರಕಲಾ ಕ್ಷೇತ್ರವು ಅವುಗಳನ್ನು ಉಳಿಸುವ ಮುಂದಿನ ಪೀಳಿಗೆ ಮೀಸಲಿಡುವ ಜವಾಬ್ದಾರಿ ಹೆಚ್ಚಿದೆ ಆದರೂ ಭಿತ್ತಿ ಚಿತ್ರಗಳ ಸಂರಕ್ಷಣೆಗೆ ಸರ್ಕಾರವು ಕೈಗೊಂಡಿರುವ ಕಾರ್ಯಕ್ರಮಗಳು ಸ್ವಾಗತಾರ್ಹ. ಆದರೆ ಆ ಕಾರ್ಯಕ್ರಮಗಳು ಭಿತ್ತಿ ಚಿತ್ರಗಳ ರಕ್ಷಣೆಯಾಗಬೇಕೆ ಹೊರತು ಮಾರಕವಾಗಬಾರದು ಇದಕ್ಕೆ ಉದಾಹಣೆಯಾಗಿ ಈ ಹಿಂದೆ ಸಿಬಿ ಭಿತ್ತಿ ಚಿತ್ರವು ರಾಸಾಯನಿಕ ಲೇಪನದಿಂದ ರಕ್ಷಣೆ ಕಾರ್ಯವನ್ನು ಪುರಾತತ್ವ ಇಲಾಖೆ ಬೆಂಗಳೂರು ಪ್ರಯೋಗ ಮಾಡಲಾಗಿದ್ದು ಇದರ ಪರಿಣಾಮವಾಗಿ ಚಿತ್ರಗಳು ತನ್ನ ಶಕ್ತಿಯನ್ನು ಇನ್ನಷ್ಟು ಕಳೆದುಕೊಂಡಿವೆ. ಕಾರಣ ನುರಿತ ಕಲಾವಿದರ ಕೊರತೆ, ನೈಸರ್ಗಿಕ ಬಣ್ಣಕ್ಕೆ ಹೊಂದಿಕೊಳ್ಳದ ರಾಸಾಯನಿಕ ಅನಿಲ ಉತ್ತಮ ತಜ್ಞರು ಸರಿಯಾದ ಪ್ರಮಾಣದಲ್ಲಿ ಕಾರ್ಯನಿರ್ವಹಿಸದೇ ಇರುವುದು ಈ ಚಿತ್ರಗಳ ಆಯಸ್ಸು ಕಡಿಮೆಯಾಗಲು ಕಾರಣವಾಗಿದೆ.

ಇಂತಹ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಭಿತ್ತಿ ಚಿತ್ರಗಳ ಸಂರಕ್ಷಣೆಗೆ ಬೇಕಾಗುವ ರಾಸಾಯನಿಕ ಅಥವಾ ನೈಸರ್ಗಿಕ ಅನಿಲಗಳ ಬಗ್ಗೆ ಅಧ್ಯಯನದ ಅಗತ್ಯತೆ ಇದೆ. ಹಾಳಾಗುತ್ತಿರುವ ಭಿತ್ತಿ ಚಿತ್ರಗಳು, ಭಿತ್ತಿಯ ರಚನೆಯ ಕುರಿತ ತಜ್ಞರು ಚಿಂತಿಸಬೇಕಾಗಿದೆ. ತಮಿಳುನಾಡಿನ ಮಧುರೈನ ಕಲ್ಯಾಣಿಯೊಂದರ ಸುತ್ತಲೂ ಹಳೆ ಮಾದರಿಯ ಶಾಸ್ತ್ರ ಗಂಥಗಳಲ್ಲಿ ಸೂಚಿಸಿದ ಹಾಗೆ ಭಿತ್ತಿಯ ರಚನಾಕಾರ್ಯ ನಡೆಯುತ್ತಿರುವುದು ದೇಶದ ಹೆಮ್ಮೆಯ ವಿಷಯ ಹಾಗೂ ಆ ರಾಜ್ಯವು ಇಂತಹ ಕಲಾ

ಪರಂಪರೆಗೆ ನೀಡುತ್ತಿರುವ ಪ್ರೋತ್ಸಾಹ ಸ್ವಾಗತಾರ್ಹವಾದುದು. ಇಂತಹ ಕಾರ್ಯಕ್ರಮಗಳು ಕರ್ನಾಟಕದ ಭಿತ್ತಿ ಚಿತ್ರ ಪರಂಪರೆಯ ಉಳಿವಿಗಾಗಿ ಮಾಡುವುದು ಕಲಾ ಸಂಸ್ಕೃತಿಗೆ ಸಲ್ಲಿಸಬೇಕಾದ ಗೌರವ ನಮ್ಮೆಲ್ಲರ ಹೊಣೆಗಾರಿಕೆಯಾಗಿದೆ.

ಇತ್ತೀಚಿನ ದಿನಗಳಲ್ಲಿ ಪ್ರಾಚ್ಯ ವಸ್ತು ಇಲಾಖೆಯು ಹಂಪಿ ವಿರೂಪಾಕ್ಷ ದೇವಾಲಯದ ಛಾವಣಿಯಲ್ಲಿನ ಭಿತ್ತಿ ಚಿತ್ರಗಳ ರಾಸಾಯಿನಿಕ ಸಂರಕ್ಷಣೆ ಕಾರ್ಯವು ನಡೆದಿದ್ದು, ಇದು ಕರ್ನಾಟಕದಾದ್ಯಂತ ಇರುವ ಭಿತ್ತಿ ಚಿತ್ರಗಳ ಕಡೆಗೆ ಗಮನಹರಿಸಿ ಅವುಗಳ ಸಂರಕ್ಷಣೆಯನ್ನು ಮಾಡುವುದು ಇಂದು ಅತ್ಯಂತ ಅಗತ್ಯವಾದ ಕಾರ್ಯಕ್ರಮವಾಗಿದೆ.

ಮೊದಲನೇ ಅಧ್ಯಾಯವು ಅಧ್ಯಯನವನ್ನು ಪ್ರಾರಂಭ ಮಾಡಿದ ಉದ್ದೇಶ, ಚಿತ್ರಕಲೆಯ ಉಗಮದ ಬಗ್ಗೆ ಸಂಕ್ಷಿಪ್ತ ವಿವರ ನೀಡುವುದರ ಜೊತೆಗೆ ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳು ಹಾಳಾಗುತ್ತಿರುವ ಹಿನ್ನೆಲೆಯಲ್ಲಿ ಅವುಗಳ ಛಾಯಾ ಚಿತ್ರಣ ಮತ್ತು ವಿವರಣೆಯನ್ನು ಒಂದೆಡೆ ಕಟ್ಟಿಕೊಡುವ ಉದ್ದೇಶ ಮತ್ತು ಅಧ್ಯಯನದ ಸ್ವರೂಪ ವಿವಿಧತೆಗಳಿಂದ ಕೂಡಿರುವುದುರ ಬಗ್ಗೆ, ಭಿತ್ತಿ ಚಿತ್ರದ ವ್ಯಾಪ್ತಿಯು ವಿಸ್ತೃತವಾಗಿದ್ದು ಪ್ರಸ್ತುತ ಅಧ್ಯಯನಕ್ಕೆ ತುಮಕೂರು ಜಿಲ್ಲೆಯನ್ನು ಮಾತ್ರ ಮೀಸಲಿಸಿರಿಸಿಕೊಂಡಿದ್ದೇನೆ ಹಾಗೂ ಕ್ಷೇತ್ರಕಾರ್ಯದ ಮೂಲಕ ಅನಾವರಣಗೊಳಿಸಲಾಗಿದೆ.

ಎರಡನೇ ಅಧ್ಯಾಯವನ್ನು ಜಿಲ್ಲೆಯ ಐತಿಹಾಸಿಕ ಹಿನ್ನೆಲೆ ತುಮಕೂರು ಎಂಬ ಹೆಸರಿನ ಪರಿಚಯ ತುಮಕೂರು ವಿವಿಧ ಅರಸರು ಪಾಳೇಗಾರರು, ನಾಯಕರ ಆಳ್ವಿಕೆಗೆ ಒಳಪಟ್ಟ ಸಂಕ್ಷಿಪ್ತ ವಿವರ, ತುಮಕೂರಿನ ಪರಿಸರ ಭೌಗೋಳಿಕ ಸ್ಥಿತಿಗತಿ ಅವುಗಳನ್ನು ಪರಿಚಯಿಸುತ್ತ, ಜಿಲ್ಲೆಯು ಸಾಂಸ್ಕೃತಿಕವಾಗಿ ವಾಸ್ತು, ಶಿಲ್ಪ, ಚಿತ್ರಕಲೆ ಜನಪದ ಕಲೆ ಸಾಹಿತ್ಯ ಮತ್ತಿತರ ಕ್ಷೇತ್ರಗಳಲ್ಲಿ ತನ್ನದೇ ಆದ ಮಹತ್ವವನ್ನು ಹೊಂದಿ ರಾಜ್ಯದಲ್ಲಿ ಗುರುತಿಸಿಕೊಂಡಿದೆ ಎಂಬುದರ ವಿಷಯದ ಬಗ್ಗೆ ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ.

ತುಮಕೂರು ಜಿಲ್ಲೆಯಲ್ಲಿ ಅತಿಹೆಚ್ಚು ಭಿತ್ತಿ ಚಿತ್ರಗಳು ರಚನೆಗೊಂಡಿರುವುದು (ಮೈಸೂರು ಹೊರತು) ಪಡಿಸಿ ನಾಡಿಗೆ ಕೀರ್ತಿತಂದಂತೆ, ಅಂತವುಗಳ ನೆಲೆಗಳ ವಿವರ ಈ ಪ್ರದೇಶಗಳು ಹಿಂದಿನಿಂದ ಹೇಗೆ ಗುರುತಿಸಿಕೊಂಡು ಬಂದಿವೆ. ಜಿಲ್ಲೆಯಾದ್ಯಂತ ಭಿತ್ತಿ ಚಿತ್ರಗಳು ಹಾಲಿ ಇರುವ ಹಾಗೂ ಇಲ್ಲದಿರುವ ನೆಲೆಗಳು ಅಲ್ಲಿನ ಚಿತ್ರಗಳ ವಿವರ (ರೇಖೆ, ಬಣ್ಣ, ಸಂಯೋಜನೆ, ಶೈಲಿ) ಮೂರನೇ ಅಧ್ಯಾಯವನ್ನು ಮೀಸಲಾಗಿರಿಸಲಾಗಿದೆ.

ಪ್ರತಿಯೊಂದು ಭಿತ್ತಿ ಚಿತ್ರಗಳ ನೆಲೆಯಲ್ಲೂ ಒಂದಲ್ಲ ಒಂದು ಧರ್ಮದ ಪ್ರಭಾವ ಇದ್ದೇ ಇರುತ್ತದೆ. ಅದೇ ರೀತಿ ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳಲ್ಲಿ ಶೈವ ವೈಷ್ಣವ ಧರ್ಮಗಳ ಪ್ರಭಾವ ಹೆಚ್ಚಾಗಿ ಕಂಡು ಬಂದಿರುವುದು ಚಿತ್ರ ಹಾಗೂ ದೇವಾಲಯಗಳ ಮೂಲಕ ತಿಳಿಯುತ್ತದೆ. ಅಂತೆಯೇ ನಾಲ್ಕನೇ ಅಧ್ಯಾಯನವು ಶೈವ ಧರ್ಮದ ಚಿತ್ರಗಳಿಗೆ ಮೀಸಲಿಡಲಾಗಿದ್ದು, ಅಲ್ಲಿನ ವಸ್ತು ವಿಷಯ, ಹಿನ್ನೆಲೆ ಪುರಾಣ, ಶೈಲಿ ಮುಂತಾದ ಚಾರಿತ್ರಿಕ ಮಹತ್ವದ ಅಂಶಗಳ ಬಗ್ಗೆ ಐತಿಹಾಸಿಕ ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

ಜಿಲ್ಲೆಯಲ್ಲಿ ರಚಿತವಾದ ಭಿತ್ತಿ ಚಿತ್ರಗಳಲ್ಲಿ ವೈಷ್ಣವ ಧರ್ಮದ ಭಿತ್ತಿ ಚಿತ್ರಗಳು ಕಂಡು ಬಂದಿರುವುದು ವೈಷ್ಣವ ಧರ್ಮೀಯರ ಪ್ರಭಾವ ಹೆಚ್ಚಾಗಿ ಇಲ್ಲಿನ ಚಿತ್ರಗಳ ಮೇಲಾಗಿದೆ. ಇಲ್ಲಿನ ಎಲ್ಲಾ ದೇವಾಲಯ, ಮಠ, ಮನೆಯಲ್ಲಿನ ಭಿತ್ತಿ ಚಿತ್ರಗಳು ವೈಷ್ಣವ ಧರ್ಮಕ್ಕೆ ಹೆಚ್ಚು ಮೀಸಲಿಟ್ಟಿರುವುದು ಅಧ್ಯಯನದಿಂದ ತಿಳಿದು ಬಂದಿದ್ದು ಅವುಗಳ ವಸ್ತು ವಿಷಯ ಚಿತ್ರಗಳ ವರ್ಗೀಕರಣವನ್ನು ಐದನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಇಲ್ಲಿನ ಚಿತ್ರಕಾರರು ದೈವ ಪ್ರೇರಣೆಯಂತೆ ಧರ್ಮ ಪ್ರಚಾರಕ್ಕಾಗಿಯೇ ತಮ್ಮ ಕಲೆಯನ್ನು ಮೀಸಲಿಡದೆ ಪ್ರಾದೇಶಿಕ ಹಿನ್ನೆಲೆಯನ್ನು ಹೊಂದಿದ ವಾಸ್ತವ ಬದುಕಿನ ಬಡವ ಬಲ್ಲಿದ ಎಂಬ ತಾರತಮ್ಯ ತೋರದೆ ವೃತ್ತಿ ಬದುಕಿನ ಚಿತ್ರಣ. ರಾಜರ ವೈಭವವನ್ನು ತೋರುವ ಜನರ ವಿನಯ ವಿನಮ್ರತೆಯನ್ನು ರಾಜ ದೇವರ ಸಮಾನ ಎನ್ನುವಂತೆ, ರಾಜನ ಸಂತೋಷಕ್ಕಾಗಿ ಹಲವಾರು ನೃತ್ಯರೂಪಕಗಳನ್ನು, ರಾಜನ ಶೌರ್ಯಪರಾಕ್ರಮ, ಆಡಳಿತ ಶಿಸ್ತು, ಕುರುಬ ಜನಾಂಗದ ಉಗಮದ ಇತಿಹಾಸದ ಚಿತ್ರಗಳು, ನೈಸರ್ಗಿ, ಅಲಂಕಾರಿಕ ನಕ್ಷೆಯ ಸಮಯೋಚಿತ ಬಳಕೆ, ಪ್ರಾಣಿಪಕ್ಷಿಗಳನ್ನು ಕಡೆಗಣಿಸದೆ ಅವುಗಳಿಗೆ ಪ್ರತ್ಯೇಕ ಆಕರ್ಷಣೆಯುಕ್ತ ದೇಹರಚನೆ, ಅಷ್ಟೇ ಅಲ್ಲದೆ ಲೈಂಗಿಕ ಕ್ರೀಡೆಗೆ ಸಂಬಂಧಿಸಿದ ಹಲವಾರು ಭಂಗಿಗಳ ಪರಿಚಯವನ್ನು ಕಲಾವಿದನು ಸವಿಸ್ತಾರವಾಗಿ ರಚಿಸಿರುವ ಚಿತ್ರಗಳ ವಿವರವನ್ನು ಆರನೇ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಏಳನೇಯ ಅಧ್ಯಾಯದಲ್ಲಿ ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳ ಮೇಲಾದ ಪ್ರಭಾವ ಪ್ರೇರಣೆ, ಪ್ರೋತ್ಸಾಹಗಳು ಪ್ರಾದೇಶಿಕ ಹಿನ್ನೆಲೆಯ ಚಿತ್ರರಚನೆಗೆ ಕಾರಣ, ನೆರೆಹೊರೆಯ ಭಿತ್ತಿ ಚಿತ್ರಗಳ ಪ್ರಭಾವ ರಾಜಮನೆತನಗಳ ಪ್ರೋತ್ಸಾಹ, ಕಲಾವಿದ ಚಿತ್ರ ರಚನೆಯ ಸಂದರ್ಭದಲ್ಲಿ ಬಳಸುತ್ತಿದ್ದ ನೈಸರ್ಗಿ ವಸ್ತು, ನೈಸರ್ಗಿಕ ಬಣ್ಣ, ಚಿತ್ರ ರಚನೆ ಮಾಡಲೂ ವ್ಯವಸ್ಥಿತವಾದ ಸ್ಥಳದ ಆಯ್ಕೆ, ಪುರಾಣ ಗ್ರಂಥಗಳಲ್ಲಿ ಭಿತ್ತಿ ರಚನೆಯ ಬಗ್ಗೆ ತಿಳಿಸಿರುವ ಕೆಲವು ಮಾಹಿತಿಗಳನ್ನ ಇಲ್ಲಿ ಚರ್ಚಿಸಿದ್ದು, ರಾಜಾಶ್ರಯ ಪಡೆದ ಕಲೆ ಎಂಬುದನ್ನು ಇಲ್ಲಿನ ಚಿತ್ರ ಶೈಲಿಯು ವ್ಯಕ್ತಪಡಿಸುತ್ತದೆ. ಎಂಬಿತ್ಯಾದಿ ವಿಷಯಗಳನ್ನು ತಿಳಿಸಲಾಗಿದೆ.

ಭಿತ್ತಿ ಚಿತ್ರಗಳು ಸುಮಾರು ೧೯ನೇ ಶತಮಾನದ ಅವಧಿಯಲ್ಲಿ ರಚನೆಗೊಂಡಿರುವುದರಿಂದ ಹಲವಾರು ಚಿತ್ರಗಳು ಈಗಾಗಲೇ ನಾಶವಾಗಿದ್ದು ಉಳಿದ ಭಿತ್ತಿ ಚಿತ್ರಗಳು ಹಾಳಾಗುವ ಹಂತವನ್ನು ತಲುಪಿರುವುದು ಕಂಡು ಬರುತ್ತದೆ. ಈ ವಾಸ್ತವ ಸ್ಥಿತಿಗತಿಗಳ ಬಗ್ಗೆ ತಿಳಿಸುತ್ತಾ, ಮುಂದಿನ ಪೀಳಿಗೆಗೆ ಭಿತ್ತಿ ಚಿತ್ರಗಳನ್ನು ಕಟ್ಟಿಕೊಡುವ ಅಥವಾ ಉಳಿಸಿಕೊಳ್ಳುವ ಹಲವಾರು ಮಾರ್ಗೋಪಾಯಗಳು ಸಾಮಾಜಿಕ ಜವಾಬ್ದಾರಿಯಾಗಿದೆ. ಇಲ್ಲಿ ಕಲಾವಿದರು, ಕಲಾವಿದ್ಯಾರ್ಥಿಗಳು, ಸ್ಥಳೀಯರು, ಮಠಮಂದಿರಗಳ ಕ್ಷೇಮ ಪಾಲಕರು ವಹಿಸಿಕೊಳ್ಳಬೇಕಾದ ಜವಾಬ್ದಾರಿ, ಉಳಿಸಿಕೊಳಿಸಿಕೊಳ್ಳುವ ಕೆಲವು ಕ್ರಮಗಳ ಬಗ್ಗೆ ವಿವೇಚಿಸಲು ಪ್ರಯತ್ನಿಸಲಾಗಿದೆ.

ಅಲ್ಲದೆ ಅನುಬಂಧದಲ್ಲಿ ಅಧ್ಯಯನಕ್ಕೆ ಪೂರಕವಾದ ಗ್ರಂಥಗಳ ಹೆಸರು, ಲೇಖಕರ ಹೆಸರು, ಪ್ರಕಾಶನ, ಹಾಗೂ ಪ್ರಕಟಣೆಗೊಂಡ ಇಸವಿಯನ್ನು ನೀಡಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ

ಅಧ್ಯಯನಕ್ಕೆ ಅನುಕೂಲವಾಗುವ ಕೆಲವು ಮಾಹಿತಿ ನೀಡಿದವರ ವಕ್ಯವಿವರ, ಭೀತ್ತಿ ಚಿತ್ರಗಳಿರುವ ನೆಲೆಗಳ (ತಾಲ್ಲೂಕು) ನಕ್ಷೆ ಮುಂತಾದ ವಿವರಣೆಯನ್ನು ನೀಡಲಾಗಿದೆ.

ಫಲಿತಗಳು

೧. ಕರ್ನಾಟಕದ ಜಿಲ್ಲೆಗಳಲ್ಲಿ ಮೈಸೂರನ್ನು ಹೊರತುಪಡಿಸಿದರೆ ಅತಿ ಹೆಚ್ಚು ಭಿತ್ತಿ ಚಿತ್ರಗಳನ್ನು ಹೊಂದಿದ ಜಿಲ್ಲೆ ತುಮಕೂರು ಎಂಬುದು ಕಂಡು ಕೊಳ್ಳಲಾಗಿದೆ.

೨. ತುಮಕೂರು ಜಿಲ್ಲೆಯಲ್ಲಿ ವಿವಿಧ ನೆಲೆಗಳಲ್ಲಿ ಭಿತ್ತಿ ಚಿತ್ರಗಳು ಕಂಡುಬಂದಿವೆ. ಅರಮನೆಗಳು, ದೇವಾಲಯಗಳು, ಮನೆಗಳು, ಮಠಗಳು ಹಾಗೂ ಸಾರ್ವಜನಿಕ ಕಟ್ಟಡಗಳು ಹೀಗೆ ವೈವಿಧ್ಯ ನೆಲೆಗಳಲ್ಲಿ ಚಿತ್ರ ರಚನೆಯಾಗಿರುವುದು ಜಿಲ್ಲೆಯ ವಿಶೇಷತೆಯಾಗಿದೆ.

೩. ತುಮಕೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಕಂಡುಬರುವ ಭಿತ್ತಿ ಚಿಕ್ರಗಳು ಹಲವಾರು ಕಾಲಘಟ್ಟಗಳಲ್ಲಿ ರಚನೆಗೊಂಡಿವೆ. ಪ್ರಾಗಿತಿಹಾಸಕಾಲದಿಂದ ಮೊದಲುಗೊಂಡು ಗಂಗರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಒಡೆಯರು, ಹೈದರಾಲಿ, ಟಿಪ್ಪುಸುಲ್ತಾನ್, ಪಾಳೇಗಾರರು, ಸಂಸ್ಥಾನಿಕರು ಮತ್ತು ಬ್ರಿಟೀಷರ ಕಾಲಕ್ಕೂ ಸಹಿತ ಈ ಪ್ರದೇಶದಲ್ಲಿ ಕಲೆ ಸಾಂಸ್ಕೃತಿಕ ನೆಲೆಯನ್ನು ಉಳಿಸಿಕೊಂಡಿದೆ.

೪. ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳಲ್ಲಿ ಹಲವು ಧರ್ಮಗಳಿಗೆ ಸಂಬಂಧಪಟ್ಟ ಚಿತ್ರಗಳು ರಚನೆಯಾಗಿವೆ. ಶೈವ ಧರ್ಮ ವೈಷ್ಣವ ಧರ್ಮಗಳಿಗೆ ಸಂಬಂಧಿಸಿದ ಚಿತ್ರಗಳು ಇಲ್ಲಿವೆ ಅಲ್ಲದೆ ಒಂದು ಧರ್ಮಕ್ಕೆ ಸಂಬಂಧಪಟ್ಟ ಚಿತ್ರ ನೆಲೆಯಲ್ಲಿ ಮತ್ತೊಂದು ಧರ್ಮದ ಚಿತ್ರಗಳನ್ನು ರಚಿಸುವ ಮೂಲಕ ಈ ಪ್ರದೇಶದ ಜನರು ಧಾರ್ಮಿಕ ಸಮನ್ವಯತೆಯನ್ನು ಮೆರೆದಿದ್ದಾರೆ.

೫. ಈ ಜಿಲ್ಲೆಯ ಭಿತ್ತಿ ಚಿತ್ರಕಲೆಯ ಬೆಳವಣಿಗೆಗೆ ಕೇವಲ ರಾಜ ಮಹಾರಾಜರಲ್ಲದೆ ಸಂಸ್ಥಾನಿಕರು, ಪಾಳೇಗಾರರು, ಅಧಿಕಾರಿಗಳು, ಶ್ರೀಮಂತ ವ್ಯಕ್ತಿಗಳು, ಮಠಮಾನ್ಯದ ಸ್ವಾಮೀಜಿಗಳು, ಸಾಮಾನ್ಯ ಜನರೂ ಸಹಿತ ಪ್ರೋತ್ಸಾಹ ನೀಡಿ ಬೆಳೆಸಿರುವುದು ಕಂಡು ಬರುತ್ತದೆ.

ಪ್ರಸ್ತುತ ಅಧ್ಯಯನವು ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳಿಗೆ ಸಂಬಂಧಪಟ್ಟಿದ್ದಾದರು ಸಹಿತ ಅದರ ಜೊತೆಗೆ ಪೂರಕವಾಗಿ ಐತಿಹಾಸಿಕ, ರಾಜಕೀಯ, ಸಾಮಾಜಿಕ, ಮತ್ತು ಸಾಂಸ್ಕೃತಿಕ ಅಂಶಗಳನ್ನು ಪ್ರತಿಬಿಂಬಿಸುವಂತೆ ಈ ಅಧ್ಯಯನವನ್ನು ಜನಸಮುದಾಯದ ಹಿನ್ನೆಲೆಯಲ್ಲಿ ರೂಪಿಸಲಾಗಿದೆ. ಇದು ಕಲಾತ್ಮಕ ಅಧ್ಯಯನವಾಗಿದ್ದರೂ ಅದರ ಹಿನ್ನೆಲೆಯಲ್ಲಿ ಮೇಲಿನ ಎಲ್ಲ ಅಂಶಗಳು ಅನಾವರಣಗೊಂಡಿವೆ ಜೊತೆಗೆ ಕಲೆಯ ಸಂಗತಿಗಳಾದ ಬಣ್ಣ, ರೇಖೆ, ಸಂಯೋಜನೆ, ತಾಂತ್ರಿಕತೆ ಮುಂತಾದ ಅಂಶಗಳು ಹೆಚ್ಚಿನ ಪ್ರಮಾಣದಲ್ಲಿ ಬೆಳಕು ಕಂಡಿವೆ. ಅದರ ಜೊತೆಗೆ ಧಾರ್ಮಿಕ ಹಿನ್ನೆಲೆ, ಅಂದಿನ ನಿತ್ಯದ ಜನ ಜೀವನ ಇವೆಲ್ಲವುಗಳು ಈ ಅಧ್ಯಯನದಲ್ಲಿ ಪರೋಕ್ಷವಾಗಿ ತೆರೆದುಕೊಂಡಿವೆ. ಆದರೂ ಸಹಿತ ಸಮಯ ಮತ್ತು ಅಧ್ಯಯನ ಮಿತಿಯು ಇದಕ್ಕಿರುವುದರಿಂದ ಕೇವಲ ಒಂದು ಹಂತದ ಅಧ್ಯಯನವನ್ನು ಮಾತ್ರ ಇಲ್ಲಿ ಕೈಗೊಳ್ಳಲಾಗಿದೆ. ಈ ಅಧ್ಯಯನವು ತುಮಕೂರಿನರು ಜಿಲ್ಲೆಯ ಭಿತ್ತಿ ಚಿತ್ರಗಳ ಬಗ್ಗೆ ಮುಂದಿನ ಅಧ್ಯಯನಕಾರರಿಗೆ ಒಂದು ಮಾರ್ಗಸೂಚಿಯಾಗಬಲ್ಲದೆಂದು ವಿನಯದಿಂದ ಹೇಳಬಯಸುತ್ತೇನೆ.

# ಅನುಬಂಧಗಳು

೧. ನೆಲೆಗಳು

೨. ನಕಾಶೆ

೩. ಗ್ರಂಥಋಣ

೪. ವಕ್ತೃವಿವರ

೫. ಸಂಕ್ಷೇಪಗಳು

# ೧. ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಗಳ ನೆಲೆಗಳು

| ತುಮಕೂರು ತಾ | ಗುಬ್ಬಿ ತಾ | ಚಿಕ್ಕನಾಯಕನಹಳ್ಳಿ ತಾ | ಕುಣಿಗಲ್ ತಾ | ತುರುವೇಕೆರೆ ತಾ | ಸಿರಾ ತಾ | ತಿಪಟೂರು ತಾ | ಮಧುಗಿರಿ ತಾ |
|---|---|---|---|---|---|---|---|
| ೧.ನಲ್ಲಪ್ಪನವರ ಮನೆ* | ೧.ಓಹಿಲೇಶ್ವರ ದೇವಾಲಯ* | ೧.ಯಳನಡು ಸಿದ್ಧರಾಮೇಶ್ವರ ದೇವಾಲಯ* | ೧.ಅಮೃತೂರು ♦ | ೧. ಬೆನಕನಕೆರೆ ♦ | ೧. ರೇವಣಸಿದ್ಧೇಶ್ವರ ದೇವಾಲಯ ♦ | ೧.ಕೆರೆಗೋಡಿ ♦ | ೧. ಮಿಂಚಕಲ್‌ಗೊಲ್ಲಹಳ್ಳಿ* ಹನುಮಂತದೇವಾಲಯ |
| ೨.ಸಿಬಿ ♦ | ೨.ತುಳಸೀಕಟ್ಟೆ* | ೨.ಹಾಗಲವಾಡಿ* | ೨.ಹೆಬ್ಬೂರು ♦ | | ೨.ಬಂಕಾಪುರ * | ೨.ರಂಗಾಪುರ ♦ | ೨. ತುಂಗವಟಿ ದೇವಾಲಯ* |
| | | | | | ೩.ಮರಡಿ ರಂಗನಾಥ ದೇವಾಲಯ * | | |

## ಸಂಕ್ಷೇಪಗಳು

* ಭಿತ್ತಿಚಿತ್ರಗಳು ಇಲ್ಲ

♦ ಭಿತ್ತಿಚಿತ್ರಗಳು ಲಭ್ಯ

ತಾ ತಾಲ್ಲೂಕು



ಕಲ್ಬುರ್ಗಿ
(ಗುಲಬರ್ಗಾ)
ಬೆಳಗಾವಿ
ಬಾಗಲಕೋಟೆ
ರಾಯಚೂರು
ಧಾರವಾಡ
ಕೊಪ್ಪಳ
ಉತ್ತರ ಕನ್ನಡ
ಹಾವೇರಿ
ದಾವಣಗೆರ
ಕರ್ನಾಟಕ
ಚಿತ್ರದುರ್ಗ
ಚಿಕ್ಕಮಗಳೂರು
ತುಮಕೂರು
ಹಾಸನ
ದಕ್ಷಿಣ ಕನ್ನಡ
ಕೋಲಾರ
ಮಂಡ್ಯ
ಕೊಡಗು
ಮೈಸೂರು
ಚಾಮರಾಜನಗರ

## ೩. ಗ್ರಂಥಋಣ

೦೧. ಆಲೇಖ್ಯ, ೧೯೯೯, ಡಾ.ಅ.ಲ.ನರಸಿಂಹನ್, ಸಂಯೋಜಿತ, ಬೆಂಗಳೂರು.

೦೨. ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ ಒಂದು ಅಧ್ಯಯ, ೨೦೦೧, ಡಾ.ಯಾದಪ್ಪ ಪರದೇಶಿ, ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಅ.ಮ., ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೦೩. ಕರ್ನಾಟಕ ಜನಪದ ಚಿತ್ರಕಲೆ, ೧೯೯೩, ಡಾ.ಎಸ್.ಸಿ.ಪಾಟೀಲ, ವೀರಶೈವ ಅಧ್ಯಯನ ಸಂಸ್ಥೆ, ಗದಗ.

೦೪. ಕರ್ನಾಟಕ ಭಿತ್ತಿಚಿತ್ರ ಪರಂಪರೆ, ೧೯೯೮, ಅ.ಲ.ನರಸಿಂಹನ್, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೦೫. ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ೨೦೦೫, ಡಾ.ಎಚ್.ಎನ್.ಚಿತ್ರಗಾರ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅ.ಮ.ಪ್ರ.

೦೬. ಕರ್ನಾಟಕದ ಭಿತ್ತಿಚಿತ್ರಗಳು, ೧೯೮೩, ಬಿ.ವ್ಹಿ.ಕೆ.ಶಾಸ್ತ್ರಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೦೭. ಕರ್ನಾಟಕದ ಚಿತ್ರಕಲೆ, ಡಾ.ಶಿವರಾಮಕಾರಂತ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೦೮. ಕರ್ನಾಟಕ ಪರಂಪರೆ ಸಂಪುಟ-೨,

೦೯. ಕಲಾಪ್ರಪಂಚ, ೨೦೦೮, ಡೈ.ಶಿವರಾಮ ಕಾರಂತ, ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೧೦. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೨, ೨೦೦೦, ಡಾ.ರಹಮತ್ ತರೀಕೆರೆ, ಕನ್ನಡ ವಿಶ್ವವಿದ್ಯಾಲ, ಹಂಪಿ

೧೧. ಕರ್ನಾಟಕ ಕಲೆಗಳ ಕೋಶ, ಡಾ.ಹಿ.ಚಿ.ಬೋರಲಿಂಗಯ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ೧೯೯೮, ಡಾ.ಸಿಂದಗಿ ರಾಜಶೇಖರ, ಸುಜಾತ ಪಬ್ಲಿಕೇಷನ್ಸ್, ಧಾರವಾಡ.

೧೩. ಕರ್ನಾಟಕ ಸಂಗಾತಿ, ೨೦೦೨, ಪ್ರ.ಸಂ.ಪ್ರೊ.ಬರಗೂರು ರಾಮಚಂದ್ರಪ್ಪ, ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೪. ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ, ೨೦೦೦, ಕೆ.ವಿ.ಕಾಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಕಲಾ ಚರಿತ್ರೆ, ೧೯೯೮, ಅಶೋಕ ಟಿ.ಅಕ್ಕಿ, ಎಮ್.ಎಸ್.ಶಾಬಾದಿಮಠ ಬುಕ್, ಡಿಪೊ, ಗದಗ.

೧೬. ಕಲೆ ಮತ್ತು ಹಬ್ಬ, ೧೯೭೮, ಎಸ್.ಕೆ.ಹೂಗಾರ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೭. ಕಲ್ಪಸಿರಿ, ೨೦೦೨, ಸಂ.ಡಾ.ಬಿ.ನಂಜುಂಡಸ್ವಾಮಿ, ಅಖಿಲ ಭಾರತ ೬೯ನೇ ಕನ್ನಡ ಸಾಹಿತ್ಯ ಸಮ್ಮೆಳನ, ತುಮಕೂರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೮. ಚಿತ್ರಕಲಾ ಪ್ರಪಂಚ, ೧೯೯೩, ಡಾ.ಶಿವರಾಮ ಕಾರಂತರ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೧೯. ಚಿತ್ರಕಲಾ ಚಿಂತನೆ, ಶಂಕರ ಪಾಟೀಲ

೨೦. ಚಿತ್ರಲೇಖ, ೨೦೦೯, ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ, ಸರಚಂದ್ರ ಪ್ರಕಾಶನ, ಚಿತ್ತಾಪುರು, ಬೆಂಗಳೂರು.

೨೧. ಜಯಮಂಗಲಿ, ೨೦೦೨, ಪ್ರ.ಸಂ.ಕವಿತಾಕೃಷ್ಣ, ಕನ್ನಡ ಸಾಹಿತ್ಯ ಪರಿಷತ್, ಬೆಂಗೂರು.

೨೨. ತುಷಾರ ವಾರಪತ್ರಿಕೆ, ಜುಲೈ-೨೦೦೯, ರತ್ನಗರ್ಭಾ ವಸುಂಧರೆ ಕಲ್ಪಕರುನಾಡು, ತುಮಕೂರು ಜಿಲ್ಲೆ

೨೩. ದಖನಿ ಚಿತ್ರಕಲೆ, ೨೦೦೧, ಎಸ್.ಕೆ.ಅರುಣಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೨೪. ಭಾರತೀಯ ಸಂಸ್ಕೃತಿ ದರ್ಶನ, ೧೯೬೨, ಅ.ನ.ಕೃಷ್ಣತರಾಯ, ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು.

೨೫. ಭಾರತೀಯ ಕಲೆ, ಡಾ.ಶಿವರಾಮಕಾರಂತ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೬. ಭಾರತೀಯ ಕಲೆ, ೨೦೦೧, ಎನ್.ಮರಿಶಾಮಾಚಾರಿ, ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು.

೨೭. ವರ್ಣ ಸಂಚಯ, ೨೦೦೧, ಡಾ.ಎಸ್.ಸಿ.ಪಾಟೀಲ, ವಿಜಯ ಚಿತ್ರಕಲಾ ಮಹಾವಿದ್ಯಾಲಯ, ಇಲಕಲ್ಲ.

೨೮. ಶಿವತತ್ವ ರತ್ನಾಕರ, ೧೯೯೯, ಸಂ.ಮಲ್ಲೇಪುರಂ ಜಿ.ವೆಂಕಟೇಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೯. ಸಪ್ತಶ್ರೀ ಸ್ಮರಣ ಸಂಚಿಕೆ, ೨೦೦೨ ಬೆಳ್ಳಿಹಬ್ಬ ಮಹೋತ್ಸವ ಸಮಿತಿ, ಕೆರೆಗೋಡಿ ರಂಗಾಪುರ.

೩೦. ಸಿರಾ ತಾಲ್ಲೂಕಿನ ಸ್ಮಾರಕಗಳು ಹಾಗೂ ಶಾಸನಗಳು, ೨೦೦೮, ಡಾ.ಎನ್.ನಂದೀಶ್ವರ, ಪೂರ್ಣ ಚಂದ್ರತೇಜಸ್ವಿನಿ ಪ್ರಕಾಶನ.

೩೧. ಸುಜನ ಸಿರ ತುಮ್ಮೆಗೂರು, ೨೦೦೮ ಸಂ.ಕವಿತಾಕೃಷ್ಣ, ಜಿಲ್ಲಾಡಳಿತ, ತುಮಕೂರು.

೩೨. ಸೌಂದರ್ಯಶಾಸ್ತ್ರ, ಡಾ.ಕಾಶಿನಾಥ ಅಂಬಲಗಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೩. ಹೊಂಬೆಳಕು, ೧೯೮೯, ಜಿಲ್ಲಾಧಿಕಾರಿಗಳ ನೂತನ ಕಟ್ಟಡ, ತುಮಕೂರು.

೩೪. ಹೆಂಜೇರು, ೨೦೦೦, ಗಡಿನಾಡ ಸಾಹಿತ್ಯ ಸಮ್ಮೇಳನ ಜಿಲ್ಲಾ, ಕನ್ನಡ ಸಾಹಿತ್ಯ ಪರಿಷತ್ತು ತುಮಕೂರು. ತಾಲ್ಲೂಕು ಸಾಹಿತ್ಯ ಪರಿಷತ್ ಶಿರಾ, ನೃಪತುಂಗ, ವಿದ್ಯಾಸಂಸ್ಥೆ, ತುಮಕೂರು.

# ೪. ವಕ್ತೃವಿವರ

೦೧. ನಲ್ಲಪ್ಪ, ಪ್ರಧಾನ ಅರ್ಚಕರು ಸಿಬಿ ನರಸಿಂಹ ಸ್ವಾಮಿ ದೇವಾಲಯ, ಸಿಬಿ

೦೨. ಡಾ.ಬಿ.ನಂಜುಂಡಸ್ವಾಮಿ ಬಿ.ಎ.,ಎಂ.ಎಸ್, ಪಂಡಿತ್ ತಾರಾನಾಥ್ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್.ರಸ್ತೆ, ತುಮಕೂರು.

೦೩. ರಾಜಶೇಖರ, ಪ್ರಧಾನ ಅರ್ಚಕರು, ಶ್ರೀ, ಶಂಕರೇಶ್ವರ ದೇವಾಲಯ, ಕೆರೆಗೋಡಿ, ತಿಪಟೂರು.

೦೪. ಪಿ.ಪ್ರಸಾದ್, ಚಿತ್ರಕಲಾ ಶಿಕ್ಷಕರು, ಶ್ರೀ ಭೈರವೇಶ್ವರ ಪ್ರೌಢಶಾಲೆ, ಸದಾಶಿವ ನಗರ, ತುಮಕೂರು.

೦೫. ಡೇವಿಡ್, ಜೆ.ಡಿ.ಸ್ಕೂಲ್ ಆಫ್ ಆರ್ಟ್, ಶೆಟ್ಟಿಹಳ್ಳಿ ಗೇಟ್, ತುಮಕೂರು.

೦೬. ಕಿಶೋರ್‌ಕುಮಾರ್, ಅಧ್ಯಾಪಕರು, ರವೀಂದ್ರಕಲಾನಿಕೇತನ ಸ್ಕೂಲ್ ಆಫ್ ಆರ್ಟ್, ತುಮಕೂರು.

೦೭. ಗಂಗಾಧರಯ್ಯ, ಸಂಸ್ಕೃತ ಶಿಕ್ಷಕರು, ಶ್ರೀ ಪರದೇಶಿಕೇಂದ್ರ ಸ್ವಾಮೀಜಿ ವೇದ ಸಂಸ್ಕೃತ ಪಾಠ ಶಾಲೆ, ರಂಗಾಪುರ, ತಿಪಟೂರು.

೦೮. ಬಿ.ನಾಗರಾಜು, ಅರ್ಚಕರು, ಶ್ರೀ ಚನ್ನಕೇಶವ ದೇವಾಲಯ, ಬೆನಕನ ಕೆರೆ, ತುರುವೇಕೆರೆ.

೦೯. ನಾರಾಯಣಪ್ಪ ಬಿ.ಕೆ, ಬೆನಕನಕೆರೆ, ತುರುವೇಕೆರೆ.

೧೦. ಡಾ.ಅ.ಲ.ನರಸಿಂಹನ್, ನಂ.೪, ಹೊಸ ದೇವಸ್ಥಾನದ ಹತ್ತಿರ, ೧೫ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು.

## ೫. ಸಂಕ್ಷೇಪಗಳು

| | | |
|---|---|---|
| ೦೧. | ಪ್ರ.ಸಂ. | ಪ್ರಧಾನ ಸಂಪಾದಕರು |
| ೦೨. | ಕ.ಲ.ಅ. | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. |
| ೦೩. | ಕ.ವಿ.ವಿ.ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೦೪. | ಪು.ಸಂ. | ಪುಟ ಸಂಖ್ಯೆ |
| ೦೫. | ಮ.ಪ್ರ | ಮಹಾಪ್ರಬಂಧ |
| ೦೬. | ಸಂ. | ಸಂಪಾದಕ |
| ೦೭. | ಪ್ರ | ಪ್ರಕಾಶಕರು |
| ೦೮. | ಕಿ.ಪ್ರ | ಕಿರುಪ್ರಬಂಧ |
| ೦೯. | ಅ.ಪ್ರ.ಮ | ಅಪ್ರಕಟಿತ ಮಹಾಪ್ರಬಂಧ |

